

ಹಂಪಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ಪದವಿಯ ಸಂಪ್ರಬಂಧ

# "ಮಲೆನಾಡಿನ ಚಿತ್ರಗಳಲ್ಲಿ ಸಾಮಾಜಿಕ ಜೀವನ ಹಾಗೂ ಪ್ರಕೃತಿ ವರ್ಣನೆ : ಒಂದು ಅಧ್ಯಯನ"

**ನೊಂದಣಿಸಂಖ್ಯೆ : 140701030084**



ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ



ಎಂ.ವಿ.ಸಿ. ಸ್ನಾತಕೋತ್ತರ ಕೇಂದ್ರ

ನರಸಿಂಹರಾಜ ಕಾಲೋನಿ, ಬೆಂಗಳೂರು – 560019.

**2014-15.**





ಹಂಪಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ಪದವಿಯ ಸಂಪ್ರಬಂಧ

# "ಮಲೆನಾಡಿನ ಚಿತ್ರಗಳಲ್ಲಿ ಸಾಮಾಜಿಕ ಜೀವನ ಹಾಗೂ ಪ್ರಕೃತಿ ವರ್ಣನೆ : ಒಂದು ಅಧ್ಯಯನ"



ನೊಂದಣಿಸಂಖ್ಯೆ : 140701030084

ವಿದ್ಯಾರ್ಥಿ ಹೆಸರು
ಶಿವಪ್ಪ ಜಿ.ವಿ

ಮಾರ್ಗದರ್ಶಕರು
ಡಾ. ಬಿ. ಸಿ. ರಾಜಕುಮಾರ



ಬಿ. ಎಂ. ಶ್ರೀ.
ಸ್ಮಾರಕ ಪ್ರತಿಷ್ಠಾನ



ಎಂ.ವಿ.ಸಿ. ಸ್ನಾತಕೋತ್ತರ ಕೇಂದ್ರ

ನರಸಿಂಹರಾಜ ಕಾಲೋನಿ, ಬೆಂಗಳೂರು – 560019.

2014-15.

1244

## 2.3. "ಮಲೆನಾಡಿನ ಚಿತ್ರಗಳಲ್ಲಿ ಸಾಮಾಜಿಕ ಜೀವನ ಮತ್ತು ಪ್ರಕೃತಿ ವರ್ಣನೆ : ಒಂದು ಅಧ್ಯಯನ"

### ಪರಿವಿಡಿ

# ಅಧ್ಯಾಯ : 1

**ಪೀಠಿಕೆ :**

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಶ್ರೇಷ್ಠವಾದ, ಕವಿ ಎಂದರೆ ರಾಷ್ಟ್ರಕವಿ ಕುವೆಂಪು. ಇವರು ಕಾವ್ಯ, ಮಹಾಕಾವ್ಯ, ಖಂಡಕಾವ್ಯ, ಸಣ್ಣಕತೆ, ಕಾದಂಬರಿ, ವಿಮರ್ಶೆ, ಮಕ್ಕಳ ಸಾಹಿತ್ಯ, ಜೀವನ ಚರಿತ್ರೆ, ಕಾವ್ಯ ಮೀಮಾಂಸೆ, ನಾಟಕ, ಕವನ ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. ಇವರು ಸಮಾಜದ ಎಲ್ಲಾ ವರ್ಗದವರಿಗೂ ಒಂದು ಮಾದರಿಯಾಗಿದ್ದಾರೆ. ಇವರು ರಚಿಸಿದ ಕೃತಿಗಳಲ್ಲಿ ಉತ್ತಮ ಸಂದೇಶ ಇರುವುದನ್ನು ಕಾಣಬಹುದು. ಮಲೆನಾಡಿನಲ್ಲಿ ತಮ್ಮ ಬದುಕನ್ನು ರಚಿಸಿಕೊಂಡು ನಂತರ ವಿಶ್ವವಿಖ್ಯಾತ ಕವಿ ಎನಿಸಿದ್ದಾರೆ. ಇವರು ತಮ್ಮ ಬರಹಗಳ ಮೂಲಕ ಇತರ ಕವಿಗಳಿಗೂ ಆದರ್ಶರಾಗಿದ್ದಾರೆ. ಸರಳೆ, ಶ್ರದ್ಧೆ, ವಿಚಾರ ವಿನಿಮಯಗಳನ್ನು ಹೊಂದಿದಂತಹ ಅತ್ಯುತ್ತಮ ವ್ಯಕ್ತಿಯಾಗಿದ್ದಾರೆ. ಕುವೆಂಪು ಅವರನ್ನು ಕೆಲವು ಕವಿಗಳು ಈ ರೀತಿ ಕರೆದಿದ್ದಾರೆ. ರಸಋಷಿ, ಯುಗದ ಕವಿ, ಜಗದ ಕವಿ, ಯುಗಪುರುಷ, ಋಷಿಕವಿ, ದಾರ್ಶನಿಕ, ದೃಷ್ಟಾರ, ಪ್ರಕೃತಿ ಉಪಾಸಕ ಎಂದೆಲ್ಲಾ ಕರೆದಿದ್ದಾರೆ. ಮಹಾರಾಷ್ಟ್ರದ ಸಾಹಿತಿ ಮಾಮಾ ವಾರೆಕ್ಕರ್ ಅವರನ್ನು ಗರುಡನಿಗೆ ಹೋಲಿಸಿದರೆ, ಜಿ.ಪಿ. ರಾಜರತ್ನಂ ಟೈಟಾನ್ ಎಂದು ಕರೆದರು. ಕುವೆಂಪು ಮಹಾಮಾನವತಾವಾದಿ ಎಂದು ಕರೆದಿದ್ದಾರೆ.

ಕುವೆಂಪು ರಚಿಸಿರುವ "ಮಲೆನಾಡಿನ ಚಿತ್ರಗಳು" ಎಂಬ ಕೃತಿಯನ್ನು "ಮಲೆನಾಡಿನ ಚಿತ್ರಗಳಲ್ಲಿ ಸಾಮಾಜಿಕ ಜೀವನ ಮತ್ತು ಪ್ರಕೃತಿ ವರ್ಣನೆ : ಒಂದು ಅಧ್ಯಯನ" ಶೀರ್ಷಿಕೆಯಡಿಯಲ್ಲಿ ನನ್ನ ಸಂಶೋಧನೆಗೆ ಆಯ್ಕೆ ಮಾಡಿಕೊಂಡಿದ್ದೇನೆ.

## ಅಧ್ಯಾಯ – 2

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ :

ಕುವೆಂಪು ರವರು ನವೋದಯ ಕವಿಗಳಲ್ಲಿ ಒಬ್ಬರು. ಇವರು ನವೋದಯ ಸಾಹಿತ್ಯದ, ಇತಿಹಾಸದಲ್ಲಿ ಪ್ರಮುಖ ಸ್ಥಾನ ಗಳಿಸಿದ್ದಾರೆ. ಕನ್ನಡ ನಾಡಿನ ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆ ನೀಡಿದ್ದಾರೆ. ಕನ್ನಡ ನಾಡಿನಲ್ಲಿ ಕುವೆಂಪು ಹುಟ್ಟದೇ ಹೋಗಿದ್ದರೆ ಕನ್ನಡ ಸಾಹಿತ್ಯ ಅರ್ಧ ಬಡವಾಗುತ್ತಿತ್ತೇನೋ ಎಂಬುದು ನನ್ನ ಅನಿಸಿಕೆ. ಕುವೆಂಪು ರವರು ಮಲೆನಾಡಿನ ವಿಚಾರಗಳನ್ನು ಸಾಹಿತ್ಯದ ಮೂಲಕ ರಚಿಸದೇ ಹೋಗಿದ್ದರೆ ಮಲೆನಾಡು ಸಹ ಹಳೆಬೀಡಿನಂತೆ ಇರುತ್ತಿತ್ತೇನೋ, ಎಂಬುದು ನನ್ನ ಭಾವನೆ. ಏಕೆಂದರೆ ಕೇವಲ ಮರ, ಕಲ್ಲು, ಬಯಲು, ಪ್ರಾಣಿ, ಪಕ್ಷಿ ಇನ್ನೂ ಮುಂತಾದ ವಿಚಾರಗಳನ್ನು ತಮ್ಮ ಅನುಭವದ ಮೂಲಕ ಅಳವಡಿಸಿಕೊಂಡು ಮಲೆನಾಡಿನ ಭವ್ಯ, ಆ ಸುಂದರವಾದಂತಹ ವಿಷಯಗಳನ್ನು ತಮ್ಮ ಕೃತಿಯಲ್ಲಿ ವರ್ಣಿಸಿದ್ದಾರೆ. ಇಂತಹ ಕವಿಯು ತಮ್ಮ ಮಲೆನಾಡಿನ ಚಿತ್ರಗಳು ಕೃತಿಯಲ್ಲಿನ "ಮಲೆನಾಡಿನ ಚಿತ್ರಗಳಲ್ಲಿ ಸಾಮಾಜಿಕ ಜೀವನ ಮತ್ತು ಪ್ರಕೃತಿ ವರ್ಣನೆ : ಒಂದು ಅಧ್ಯಯನ" ಎಂಬ ವಿಷಯವನ್ನು ಅಧ್ಯಯನಕ್ಕೆ ಆಯ್ದುಕೊಂಡಿದ್ದೇನೆ. ಇದರೊಂದಿಗೆ ಮಲೆನಾಡಿನ ಇತರ ವಿಷಯಗಳನ್ನು ತಿಳಿಸುವುದು ನನ್ನ ಈ ಸಂಶೋಧನೆಯ ಉದ್ದೇಶವಾಗಿದೆ. ಕುವೆಂಪುರವರು ವೆಂಕಣ್ಣಯ್ಯನವರ ಶಿಷ್ಯರಾದರೂ ಅವರನ್ನು ಮೀರಿಸಿದಂತಹ ಬವರಣಿಗೆ ಅವರದು. ಕೆಲವು ರೀತಿಯಲ್ಲಿ ಇವರಿಗೆ ಮಾರ್ಗದರ್ಶಕರಾದ ಪ್ರಮುಖ ವ್ಯಕ್ತಿಗಳೆಂದರೆ ಕಸಿನ್ಸ್, ಡಿ.ಎಲ್.ಎನ್, ವೆಂಕಣ್ಣಯ್ಯ, ಬಿ.ಎಂ.ಶ್ರೀ. ಇನ್ನೂ ಮುಂತಾದ ವ್ಯಕ್ತಿಗಳು ಇಲ್ಲಿ ಮಲೆನಾಡಿನ ಬದುಕಿನ ಚಿತ್ರಣವನ್ನು ಕುರಿತು ತಮ್ಮ ಅನುಭವದ ಮೂಲಕವೇ ಸತ್ಯಾಂಶಗಳನ್ನು ಹುಡುಕಿದಂತಹ ಮಹಾನ್ ಕೃತಿಕಾರರು. ಮಲೆನಾಡಿನ ಬದುಕನ್ನು ರೂಪಿಸಿಕೊಳ್ಳಲು ಕೆಲವು ವರ್ಗದವರನ್ನು ಯಾವರೀತಿ ಚಿತ್ರಿಸಿದ್ದಾರೆ ಹಾಗೂ ಅವರ ವಿಚಾರ ಅಂಶಗಳನ್ನು ಯಾವ ರೀತಿ ಅಳವಡಿಸಿಕೊಂಡಿದ್ದರು ಎಂಬುದನ್ನು ತಿಳಿಯಬೇಕಿದೆ. ಮಲೆನಾಡಿನ ಚಿತ್ರಣ ಮತ್ತು ಕುವೆಂಪುರವರ ವ್ಯಕ್ತಿತ್ವದ ಮೇಲೆ ಮಲೆನಾಡಿನ ಪ್ರಭಾವ ಹೇಗೆ ಬೀರಿತ್ತು ಎಂಬ ವಿಷಯಗಳು ಪ್ರಸ್ತಾಪವಾಗಿವೆ. ಇಂತಹ ಕೆಲವು ವಿಚಾರಸಾಹಿತ್ಯಗಳು ಮಲೆನಾಡಿನ ವರ್ಣನೆಗೆ ಯಾವ ರೀತಿಯ ಅಂಶಗಳು ಕವಿಯ ಮೇಲೆ ಬೀರಿದ್ದವು. ತಮ್ಮನ್ನು ಕನ್ನಡಕ್ಕೆ

ಬರೆಯಲು ಅರ್ಪಿಸಿದಂತಹ ಮಹಾನ್ ಕವಿಗಳಾದ ಕಸಿನ್ಸ್ ಹಾಗೂ ವರ್ಡ್ಸ್‌ವರ್ತ್ ರವರ ಕೃತಿಗಳಲ್ಲಿನ ಸಾಮ್ಯತೆ ವಿಷಯಗಳನ್ನು ಸಂಕ್ಷಿಪ್ರವಾಗಿ ಅಧ್ಯಯನ ಮಾಡುವುದು ಈ ಕಿರು ಪ್ರಬಂಧದ ಉದ್ದೇಶವಾಗಿದೆ.

## ಅಧ್ಯಾಯ –3

## ಕುವೆಂಪುರವರ ಬದುಕು ಮತ್ತು ಬರಹ

1904 ಡಿಸೆಂಬರ್ 29ರಂದು ಇವರು ತೀರ್ಥಹಳ್ಳಿ ತಾಲ್ಲೂಕಿನ ಕುಪ್ಪಳ್ಳಿಯಲ್ಲಿ ಜನಿಸಿದರು. ತಂದೆ ವೆಕಟಪ್ಪಗೌಡರು. ತಾಯಿ ಸೀತಮ್ಮ ಮೊದಲು ಇವರಿಗೆ ಇದ್ದ ಹೆಸರು ಕೆ.ವಿ. ಪುಟ್ಟಪ್ಪ ಎಂದು ನಂತರ ಇವರು ಕಾವ್ಯನಾಮವಾಗಿ ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪ ಎಂಬುದನ್ನು "ಕುವೆಂಪು" ಎಂಬುದಾಗಿ ಬಳಸತೊಡಗಿದರು. ಅಂದಿನಿಂದ ಕುವೆಂಪು ಎಂಬುದೊಂದು ಜನಪ್ರಿಯ ನಾಮಾಂಕಿತವಾಯಿತು. ಮಲೆನಾಡಿನ ಮಡಿಲಿನಲ್ಲಿ ಬೆಳೆದ ಕುವೆಂಪು ಅವರಿಗೆ ನಿಸರ್ಗದ ಪ್ರೇಮ ಮಾತ್ರವಲ್ಲ, ಅಲ್ಲಿ ಗಿಜಗುಡುವ ಹಕ್ಕಿಗಳ ಸಮೂಹ, ವಿವಿಧ ಗಿಡ ಮರಗಳು ಮನಸ್ಸಂತೋಷವನ್ನು ಕೊಟ್ಟವು. ಇವರ ಜೀವನ ಉಲ್ಲಾಸಮಯವಾಗಲು ಕಾರಣವಾದವು. ಮೊದಲು ಇವರು ಶಾಲೆಗೆ ಹೋಗಲು ಪ್ರಾರಂಭಿಸಿದ್ದು ತೀರ್ಥಹಳ್ಳಿಯಲ್ಲಿ ನಂತರ ಪ್ರೌಢಶಾಲಾ ವ್ಯಾಸಂಗದಿಂದ ಎಂ.ಎ. ಪದವಿಯವರೆಗೂ ಇವರ ವಿದ್ಯಾಭ್ಯಾಸ ಮೈಸೂರಿನಲ್ಲಿಯೇ ನಡೆಯಿತು. ಈ ಸಮಯದಲ್ಲಿ ಆಂಗ್ಲ ಭಾಷೆ ಮತ್ತು ಕನ್ನಡ ಸಾಹಿತ್ಯ ಈ ಎರಡೂ ಭಾಷೆಗಳು ಇವರ ಮನಸ್ಸನ್ನು ಶ್ರೀಮಂತಗೊಳಿಸಿದವು. ಇವರಿಗೆ ಮುಖ್ಯವಾಗಿ ಮಾರ್ಗದರ್ಶನ ಮಾಡಿದವರು ಸನ್ಮಾನ್ಯ ಶ್ರೀ. ಬಿ.ಎಂ. ಶ್ರೀಕಂಠಯ್ಯ, ಶ್ರೀ. ಓ.ಎಸ್. ವೆಂಕಣ್ಣಯ್ಯ, ಹಾಗೂ ಶ್ರೀ. ಎ.ಆರ್. ಕೃಷ್ಣಶಾಸ್ತ್ರೀ. ಆಗ ಗುರುಭಕ್ತಿ ಹೇಗಿತ್ತೆಂದರೆ ಗುರುಗಳೊಡನೆ ಮಾತನಾಡುವುದಿರಲಿ ಅವರನ್ನು ಎದುರು ನೋಡಲು ಕಷ್ಟಸಾಧ್ಯ.

"ಚಿಕ್ಕಂದಿನಿಂದಲೇ, ಮಲೆನಾಡಿನ ಪರಿಸರದಲ್ಲಿ ಬೆಳೆದ ಕುವೆಂಪುರವರಿಗೆ ಅಪಾರವಾದ ಪರಿಸರ ಪ್ರೇಮ ಸದಾ ಪರಿಸರವನ್ನೇ ಕುರಿತು ಯೋಚಿಸುತ್ತಿದ್ದ." (ಆರ್. ದೊಡ್ಡೇಗೌಡ, ರಾಷ್ಟ್ರಕವಿ ಕುವೆಂಪು, ಪು. 01) ಎಂದು ಆರ್. ದೊಡ್ಡೆಗೌಡರವರು ರಾಷ್ಟ್ರಕವಿ ಕುವೆಂಪು ಎಂಬ ಪುಸ್ತಕದಲ್ಲಿ ಹೇಳಿದ್ದಾರೆ. ಇವರ ಹೆಚ್ಚು ಕೃತಿಗಳು ಪರಿಸರದ ಬಗ್ಗೆ ನೈಜ ಚಿತ್ರಣ ಕೊಡುವಂತಹವು ಮತ್ತು ಅವು ಓದುಗರಿಗೂ ಸಹ ನಿಜವಾದ ಅನುಭವಗಳನ್ನು ಕೊಡುವಂತಹವುಗಳಾಗಿವೆ.

ಅವರ ಪ್ರಾಥಮಿಕ ವಿದ್ಯಾಭ್ಯಾಸ ನಡೆದುದು ಮರಳ ಸ್ಲೇಟಿನ ಮೇಲೆ. ಹೇಳಿಕೊಟ್ಟವರು ದಕ್ಷಿಣ ಕನ್ನಡ ಜಿಲ್ಲೆಯ ಐಗಳು. ಕೆಲ ಸಮಯ ಕ್ರೈಸ್ತ ಪಂಗಡಕ್ಕೆ ಸೇರಿದ ಗುರುಗಳೊಬ್ಬರಿಂದಲೂ ಬೋಧೆ ಆಯಿತು.

ಮನೆಯಲ್ಲಿ ಆಗಿಂದಾಗ್ಗೆ ನಡೆಯುತ್ತಿದ್ದ ಜೈಮಿನಿಭಾರತ ರಾಮಾಯಣ ವಾಚನಗಳು ಬಾಲಕ ಕುವೆಂಪುವಿನ ಮೇಲೆ ಪ್ರಭಾವ ಬೀರಿದವು. ಕುವೆಂಪು ಅವರಿಗೆ ನಿಸರ್ಗವೇ ಶಾಲೆ. ನಿತ್ಯ ಪ್ರಕೃತಿದೇವಿಯೊಡನೆ ಸಂಭಾಷಣೆ, ಮಾತುಕತೆ. ಪ್ರಕೃತಿ ಸೌಂದರ್ಯೋಪಾಸನೆ ಅವರಿಗೆ ಎಳವೆಯಿಂದಲೇ ಪ್ರಾರಂಭವಾಯಿತು. ಸುಮಾರು ಎಂಟು ವರ್ಷವಯಸ್ಸಾದಾಗ ಕುವೆಂಪು ಅವರ ವಿದ್ಯಾಭ್ಯಾಸ ತೀರ್ಥಹಳ್ಳಿಯಲ್ಲಿ ಮುಂದುವರೆಯಿತು. ಆಗಲೂ ದಟ್ಟವಾಗಿ ಬೆಳೆದಿದ್ದ ತೋಪುಗಳಿಗೆ ಹೋಗುವುದೆಂದರೆ ಅವರಿಗೆ ಇಷ್ಟವಾಗುತ್ತಿತ್ತು. ಶಾಲಾ ವಿದ್ಯಾಭ್ಯಾಸದ ಸಮಯದಲ್ಲಿಯೇ ಅವರು ಪುಸ್ತಕ ಪ್ರೀತಿಯನ್ನು ಬೆಳೆಸಿಕೊಂಡರು. ಅವರ ಜ್ಞಾನದಾಹ ಅಪಾರ. ಕೈಗೆ ಸಿಕ್ಕಿದ ಪುಸ್ತಕ ಯಾವುದೇ ಇರಲಿ ಅದನ್ನು ಓದಿ ಮುಗಿಸಿದ ಮೇಲೆಯೇ ಬೇರೆ ಕೆಲಸ. ಲೋಯರ್ ಸೆಕೆಂಡರಿ ಮುಗಿಸಿದ ಬಳಿಕ ಕುವೆಂಪು ಪ್ರೌಢವ್ಯಾಸಂಗಕ್ಕಾಗಿ 1918ರಲ್ಲಿ ಮೈಸೂರು ಸೇರಿದರು. ಹಾರ್ಡ್ವಿಕ್ ಪ್ರೌಢಶಾಲೆಯ ವಿದ್ಯಾರ್ಥಿಯಾದರು. (ಅದೇ ಪು. 02) ಆಂಗ್ಲ ಸಾಹಿತ್ಯದ ಮೇಲೆ ಒಲವು ಬೆಳೆಸಿಕೊಂಡು ಹತ್ತಾರು ಪುಸ್ತಕಗಳನ್ನು ಓದಿಕೊಂಡರು. ಶಾಲೆಯಲ್ಲಿ ಹೊರಗಿನ ವಿದ್ಯಾರ್ಥಿಗಳಿಗೆ, ಅಧ್ಯಾಪಕ ವೃಂದದವರಿಗೆ ಕುವೆಂಪು ಅವರ ಪ್ರತಿಭೆಯ ಪರಿಚಯವಾಗಲು ತಡವಾಗಲಿಲ್ಲ. ಕುವೆಂಪು ಆಗಲೇ ಒಳ್ಳೆ ಬರವಣಿಗೆ ಮಾಡುವ ವಿದ್ಯಾರ್ಥಿಯಾಗಿದ್ದರು.

1920ರ ಸಮಯ ಕುವೆಂಪು ಪದ್ಯರಚನೆ ಮಾಡತೊಡಗಿದರು. ಆದರೆ ಕನ್ನಡದಲ್ಲಲ್ಲ. ಇಂಗ್ಲೀಷ್ ಭಾಷೆಯಲ್ಲಿ. ಅವರು ಆ ಹೊತ್ತಿಗೆ ಬೇಕಾದಷ್ಟು ಕನ್ನಡ ಗ್ರಂಥಗಳನ್ನು ಓದಿದ್ದರೂ ಇಂಗ್ಲಿಷ್‌ನ ಶಕ್ತಿ, ಕಾಂತಿ ಕನ್ನಡಕ್ಕಿಲ್ಲ ಎಂದು ಭಾವಿಸಿದ್ದರು. ತಾವು ಬರೆದ ಹಲವಾರು ಪದ್ಯಗಳಲ್ಲಿ ಕೆಲವನ್ನು ಆಯ್ದು 1922ರಲ್ಲಿ "Beginner's Muse" ಎಂದು ಹೆಸರಿಟ್ಟು ಪ್ರಕಟಿಸಿದರು. ಬಹುಶಃ ಅವರು ಇಂಗ್ಲಿಷಿನಲ್ಲೇ ಕಾವ್ಯ ಕೃಷಿಗೆ ತೊಡಗಿದಿದ್ದರೆ ಮತ್ತೊಬ್ಬ ವರ್ಡ್ಸ್‌ವರ್ತ್ ಇಲ್ಲವೆ ಕೀಟ್ಸ್ ಆಗುತ್ತಿದ್ದರು. ಆದರೆ ಕನ್ನಡದ ಸೌಭಾಗ್ಯ. ತಮ್ಮನ್ನು ಕನ್ನಡಕ್ಕೆ ಅರ್ಪಿಸಿಕೊಂಡರು. ಇದೂ ಸಹ ಒಂದು ಪ್ರಸಂಗದ ಪ್ರಭಾವದಿಂದಾಯಿತು.

ಮಾಧ್ಯಮಿಕ ಶಾಲೆ ವ್ಯಾಸಂಗಕ್ಕಾಗಿ ತೀರ್ಥಹಳ್ಳಿಯಲ್ಲಿದ್ದ ಶಾಲೆ ಸೇರಿದಾಗ ಪುಟ್ಟಪ್ಪನಿಗೆ ಎಂಟು ವರ್ಷ ವಯಸ್ಸು. ಪುಟ್ಟಪ್ಪ ಹನ್ನೆರಡು ವರ್ಷದವನಾಗಿದ್ದಾಗ ಅವನ ತಂದೆ ಕೊನೆಯುಸಿರೆಳೆದರು. 1920ರಲ್ಲಿ ಪುಟ್ಟಪ್ಪ ಆಗಿನ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆಯಾದರು. ಅನಂತರ ಅವರು ಮೈಸೂರಿಗೆ ತೆರಳಿ ಮುಂದಿನ ವಿದ್ಯಾಭ್ಯಾಸ ಮುಂದುವರಿಸಲು ನಿರ್ಧರಿಸಿದರು. ಆ ಸಲುವಾಗಿ ಮೈಸೂರಿನ ಕಾಳಮ್ಮನ ಗುಡಿ

ಬೀದಿಯಲ್ಲಿ ಒಂದು ಕೊಠಡಿಯನ್ನು ಬಾಡಿಗೆಗೆ ತೆಗೆದುಕೊಂಡರು. ವೆಸ್ಲಿಯನ್ ಮಿಷನ್ ಪ್ರೌಢಶಾಲೆಯನ್ನು ಸೇರಿ ತಮ್ಮ ವ್ಯಾಸಂಗವನ್ನು ಮುಂದುವರಿಸಿದರು.

ಪ್ರೌಢಶಾಲೆಯಲ್ಲಿ ಅಧ್ಯಯನ ಮಾಡುತ್ತಿದ್ದಾಗ ಸಾಹಿತ್ಯ ಅವರ ಮನಸ್ಸನ್ನು ವಿಶೇಷವಾಗಿ ಆಕರ್ಷಿಸಿತು. ವಿಶೇಷವಾಗಿ ವರ್ಡ್ಸ್‌ವರ್ತ್ ಮತ್ತು ಷೆಲ್ಲಿಯವರ ಆಂಗ್ಲ ಕವನಗಳು ಅವರ ಗಮನವನ್ನು ಸೆಳೆದವು. ಹಾಗೆಯೇ ಮಿಲ್ಟನ್ ಎಂಬ ಖ್ಯಾತ ಕವಿಯ pensoroso ಎಂಬ ಕವನವನ್ನನುಸರಿಸಿ ಆಂಗ್ಲ ಭಾಷೆಯಲ್ಲಿ ಕೆಲವು ಪದ್ಯಗಳನ್ನು ರಚಿಸಿದರು. ಆ ಪದ್ಯಗಳಲ್ಲಿ ಆಂಗ್ಲ ಕವಿಯ ಶೈಲಿ ಮತ್ತು ಭಾವಗಳ ಅನುಕರಣೆ ಕಾಣಸಿಗುತ್ತದೆ. ಹಾಗೆಯೇ ಟಾಲ್‌ಸ್ಟಾಯ್‌ರವರ ಕಾದಂಬರಿಗಳನ್ನು ಓದಿ ಆನಂದಿಸುತ್ತಿದ್ದರು. ತಮ್ಮ ಜ್ಞಾನದಾಹವನ್ನು ತಣಿಸಲು ಸಾರ್ವಜನಿಕ ಗ್ರಂಥಾಲಯಕ್ಕೂ ಆಗಾಗ ಹೋಗುತ್ತಿದ್ದರು. ಗ್ರಂಥಾಲಯದಲ್ಲಿ ಪುಸ್ತಕಗಳನ್ನು ಹುಡುಕುತ್ತಿದ್ದಾಗಲೊಮ್ಮೆ ಸ್ವಾಮಿ ವಿವೇಕಾನಂದರ ಭಾಷಣಗಳ ಸಂಕಲನಗಳು ಅವರ ಕಣ್ಣಿಗೆ ಬಿದ್ದವು. ಅವುಗಳಿಂದ ಆಕರ್ಷಿತರಾದ ಪುಟ್ಟಪ್ಪನವರು ಆ ಎಲ್ಲಾ ಸಂಕಲನಗಳನ್ನೂ ಶ್ರದ್ಧೆಯಿಂದ ಓದಿದರು. ಅನಂತರ ರಾಮಕೃಷ್ಣ ಪರಮಹಂಸರ ಜೀವನಕ್ಕೆ ಸಂಬಂಧಪಟ್ಟ ಸಾಹಿತ್ಯವನ್ನೂ ಶ್ರದ್ಧೆಯಿಂದ ಅಧ್ಯಯನ ಮಾಡಿದರು.

ಆಗ ಗಾಂಧೀಜಿಯವರ ನೇತೃತ್ವದಲ್ಲಿ ನಡೆದ ಸ್ವದೇಶಿ ಆಂದೋಲನದಿಂದ ಪ್ರಭಾವಿತರಾದ ವಿದ್ಯಾರ್ಥಿ ಪುಟ್ಟಪ್ಪನವರು ತಾವು ಧರಿಸುತ್ತಿದ್ದ ಕರಿ ಬಣ್ಣದ ಕೋಟು ಮತ್ತು ಟೋಪಿಯನ್ನು ಕಿತ್ತೆಸೆದು, ಕೈಮಗ್ಗದಿಂದ ತಯಾರಿಸಿಲ್ಪಟ್ಟ ಖಾದಿ ವಸ್ತ್ರದ ಉಡುಪನ್ನು ಧರಿಸಲಾರಂಭಿಸಿದರು.

ಕುವೆಂಪು ಶ್ರೀರಂಗಪಟ್ಟಣಕ್ಕೆ ಬಂದಿದ್ದು ಐರಿಷ್‌ಕವಿ ಜಿ.ಜೆ. ಕಸಿನ್ಸ್ ಎಂಬುವವರಿಗೆ ತಮ್ಮ ಕವನ ಸಂಕಲನವನ್ನು ತೋರಿಸಿದರು. ಕಸಿನ್ಸ್ ಕವನಗಳ ಮೇಲ ಕಣ್ಣಾಡಿಸಿ ಒಂದೆರಡು ಪ್ರಶಂಸೆಯ ಮಾತುಗಳನ್ನಾಡಿದರಾದರೂ, ಕನ್ನಡದಲ್ಲಿ ಪದ್ಯರಚಿಸಲು ಸಲಹೆ ಮಾಡಿದರು. ಆಗ ಕುವೆಂಪು ಇಂಗ್ಲೀಷಿನ ಹಾಗೆ ಭಾವನೆಗಳನ್ನು ಮೂಡಿಸಬಲ್ಲ ಸಾಮರ್ಥ್ಯ ಕನ್ನಡಕ್ಕಿದೆಯೆ ಎಂಬ ಸಂದೇಹ ವ್ಯಕ್ತಪಡಿಸಿದರು. ಕಸಿನ್ಸ್ ಉತ್ತರಿಸಿ "ಹಾಗೆ ಭಾವಿಸಬೇಕಿಲ್ಲ. ಒಂದು ಭಾಷೆ ಮತ್ತೊಂದು ಭಾಷೆಗಿಂತ ಕೀಳೇನಲ್ಲ. ಪ್ರತಿಭೆಯುಳ್ಳ ಜನ ಬಳಸಿದರೆ ಯಾವ ಭಾಷೆಯೂ ಪ್ರಭಾವ ಬೀರಬಲ್ಲದ್ದಾಗುತ್ತದೆ. ಎಂದರು. ಈ ಮಾತು ಕುವೆಂಪು ಅವರ ಮನಸ್ಸನ್ನು ಹೊಕ್ಕಿತು. ಅಂದಿನಿಂದ ಅವರು ಕನ್ನಡದಲ್ಲಿ ಬರೆಯುವ ನಿರ್ಧಾರ ತೆಗೆದುಕೊಂಡರು. ಕನ್ನಡಕ್ಕೆ

ತಮ್ಮನ್ನು ಅರ್ಪಿಸಿಕೊಂಡರು. ಕುವೆಂಪು ಮಿಲ್ಟನ್ ಕವಿಯ 'ಪ್ಯಾರಡೈಸ್ ಲಾಸ್ಟ್' ಎಂಬ ಮಹಾಕಾವ್ಯದ ಪ್ರಭಾವಕ್ಕೊಳಗಾಗಿದ್ದರು. ಕುವೆಂಪು ಸ್ವಾಮಿವಿವೇಕಾನಂದ ಮತ್ತು ರಾಮಕೃಷ್ಣ ಪರಮಹಂಸರ ಕೃತಿಗಳನ್ನು ಓದಿದ ಬಳಿಕ ಹಿಂದುಧರ್ಮದ ಮೇಲೆ ಅವರಿಗೆ ಅಪಾರ ಒಲವು ಮೂಡಿತು. ಆದಿಶಂಕರಾರ್ಯರ ಕೃತಿಗಳೂ ಇವರ ಮೇಲೆ ಗಾಢ ಪ್ರಭಾವ ಬೀರಿದವು. ಮಹಾತ್ಮ ಗಾಂಧೀಜಿ ಆಗ ಸ್ವಾತಂತ್ರ್ಯ ಚಳವಳಿ ನಡೆಸಿ ಅದು ಪರಿಣಾಮಕಾರಿಯಾಗಲು ಸ್ವದೇಶಿ ವ್ರತ ಕೈಗೊಂಡರು. ವಿದೇಶಿ ವಸ್ತು ವಸ್ತ್ರಗಳಿಗೆ ಬಹಿಷ್ಕಾರ ಹಾಕಲಾಯಿತು. ಗಾಂಧೀಜಿಯವರ ಪ್ರಭಾವಕ್ಕೆ ಒಳಗಾದ ಕುವೆಂಪು ತಾವೂ ಸಹ ವಿದೇಶಿ ಉಡುಗೆ ತ್ಯಜಿಸಿ ಖಾದಿ ಧರಿಸತೊಡಗಿದರು.

1921ರಲ್ಲಿ ಒಮ್ಮೆ " The caste – system is a menace to india" ಎಂಬ ವಿಷಯ ಕುರಿತು ಚರ್ಚಾಕೂಟವೊಂದನ್ನು ಏರ್ಪಡಿಸಲಾಗಿತ್ತು. ಅಂದಿನ ಆ ಚರ್ಚಾಕೂಟದಲ್ಲಿ ಭಾಗವಹಿಸಿದ್ದ ಪುಟ್ಟಪ್ಪನವರ ವಾದ ಸರಣಿ, ಪಾಂಡಿತ್ಯ, ಪ್ರತಿಭೆ, ವಿವೇಕಾನಂದರ ಗ್ರಂಥಗಳ ವಾಕ್ಯಗಳನ್ನು ಲೀಲಾಜಾಲವಾಗಿ ಉದ್ಧರಿಸಿ ಹೇಳುತ್ತಿದ್ದ ರೀತಿ ಇವೆಲ್ಲವನ್ನೂ, ಅಂದಿನ ಸಭಾಧ್ಯಕ್ಷರಾಗಿದ್ದ ಶ್ರೀರಾಮಕೃಷ್ಣಾಶ್ರಮದ ಸ್ವಾಮಿ ಸಿದ್ದೇಶ್ವರಾನಂದರು ಮೆಚ್ಚಿಕೊಂಡಿದ್ದರು. ಪುಟ್ಟಪ್ಪನವರ ಸಹಪಾಠಿ ಜಿ.ವಿ. ರಾಮಯ್ಯನಿಗೆ ಅಕ್ಬರ್ ಚಕ್ರವರ್ತಿಯ ಇತಿಹಾಸವನ್ನು ಎಷ್ಟು ಬಾರಿ ಓದಿದರೂ ತಲೆಗೆ ಹತ್ತುತ್ತಿರಲ್ಲಿ. ಆದರೆ, ಅದನ್ನು ಸುಲಭವಾಗಿ ನೆನಪಿಸಿಟ್ಟುಕೊಳ್ಳಲು. ಸಾಧ್ಯವಾಗುವಂತೆ ಪುಟ್ಟಪ್ಪನವರು ಆಂಗ್ಲ ಭಾಷೆಯಲ್ಲಿ ಪದ್ಯ ಭಾಷೆಯಲ್ಲಿ ಕವನಗಳನ್ನು ರಚಿಸುವುದು ಅವರ ಹುಟ್ಟುಗುಣವಾಗಿ ಹೋಗಿತ್ತು. ಪ್ರೌಢಶಾಲೆಯ ವಿದ್ಯಾರ್ಥಿ ಆಗಿದ್ದಾಗಲೇ ನೂರಾರು ಕವನಗಳನ್ನು ಆಂಗ್ಲಭಾಷೆಯಲ್ಲಿ ರಚಿಸಿದರು. ಆ ಕವನಗಳಲ್ಲಿ ಆಂಗ್ಲ ಕವನಗಳ ಅನುಕರಣವಿತ್ತು. ಆಗಿನ ದಿನಗಳಲ್ಲಿ ಅವರಲ್ಲಿ ಮನೆಮಾಡಿಕೊಂಡಿದ್ದ ಇಂಗ್ಲಿಷ್ ಭಾಷೆಯ ವ್ಯಾಮೋಹ, ಕನ್ನಡದ ಬಗೆಗಿನ ತಾತ್ಸಾರ, ಕನ್ನಡದಲ್ಲೇನಿದೆ ಎಂಬ ತಪ್ಪ ಕಲ್ಪನೆ–ಅವರು ಆಂಗ್ಲ ಭಾಷೆಯಲ್ಲಿ ರಾಶಿ ರಾಶಿಯಾಗಿ ಕವನಗಳನ್ನು ರಚಿಸಲು ಕಾರಣವಾಗಿದ್ದಿರಬೇಕು. ಅವರ ಕವನಗಳ ರಾಶಿಯನ್ನು ನೋಡಿ ಬೆರಗಾದ ಮಿತ್ರರು. ಅವುಗಳಲ್ಲಿ ಕೆಲವು ಕವನಗಳನ್ನಾದರೂ ಆಯ್ದು ಪ್ರಕಟಿಸಬೇಕೆಂದು ಒತ್ತಾಯಿಸಿದರು. ಅವರ ಆ ಒತ್ತಾಯಕ್ಕೆ ಮಣಿದು "Beginner's Muse" ಎಂಬ ಶೀರ್ಷಿಕೆಯಡಿಯಲ್ಲಿ ಆರು ಕವನಗಳ

ಸಂಗ್ರಹವನ್ನು 1922ರಲ್ಲಿ ಪ್ರಕಟಿಸಿದರು. ಇದು Ballads, Descriptive poems ಮತ್ತು Sonnets ಎಂಬ ಆಂಗ್ಲ ಕವನ ಪ್ರಕಾರಗಳನ್ನೊಳಗೊಂಡ ಸಂಗ್ರಹ.

1921ರಲ್ಲಿ ಕುವೆಂಪುವರು ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ಕುವೆಂಪು ಪದ್ಮಪತ್ರದ ಸಂಘರ್ಷವನ್ನು ಸ್ಥಾಪಿಸಿ ಅಲ್ಲಿ ಕಾವ್ಯ ವಿಮರ್ಶೆ, ವಿವೇಕಾನಂದರ ಕೃತಿಗಳ ಮೇಲೆ ಚರ್ಚೆ ಮೊದಲಾದ ಕಾರ್ಯಕ್ರಮಗಳನ್ನು ನಡೆಸಿದ್ದರು. ಆಗಲೇ ಇವರಿಗೆ ಸ್ವಾಮಿಸಿದ್ದೇಶ್ವರಾನಂದ ಪರಿಚಯವಾಗಿ ಶ್ರೀ ರಾಮ ಕೃಷ್ಣಶ್ರಮದ ಸಂಪರ್ಕವೂ ಬೆಳೆಯಿತು.

ಎಂಟ್ರೆನ್ಸ್ ತರಗತಿಯಲ್ಲಿ ಓದುತ್ತಿದ್ದಾಗಲೇ ಫ್ರಾನ್ಸ್ ದೇಶದ ಪ್ರಸಿದ್ಧ ಸಾಹಿತಿ Roman rola ಬರೆದ "Life of Shri Ramakrishna" ಎಂಬ ಗ್ರಂಥವನ್ನು ಅಮೂಲಾಗ್ರವಾಗಿ ಓದಿ ಮುನಿಸಿದರು. ಭಗವದ್ಗೀತೆಯ ಅಧ್ಯಯನದಿಂದ ಆತ್ಮಜ್ಞಾನ ಪಡೆದವರಾಗಿದ್ದ ಅವರಿಗೆ, 1923ರ ಅಂತ್ಯಭಾಗದಲ್ಲಿ ತಾಯಿ ತಿರಿಕೊಂಡಾಗ, "ಅವರ ಭೌತಿಕ ದೇಹ ಮಾತ್ರ ನಾಶವಾಗಿದೆಯೇ ಹೊರತು ಅವರ ಆತ್ಮಕ್ಕೆ ಮರಣ ಉಂಟಾಗಿಲ್ಲ; ಅವರ ಆತ್ಮ ವಿಶ್ವ ಶಕ್ತಿಯಲ್ಲಿ ಲೀನವಾಗಿದೆ' ಎಂದೇ ಭಾವಿಸಿದರು; ದುಃಖ ಅವರನ್ನು ಎಡತಾಕಲಿಲ್ಲ.

1924ರಲ್ಲಿ ಕುವೆಂಪು ಎಂಟ್ರೆನ್ಸ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಅದೇ ವರ್ಷ ಕುವೆಂಪು ಅವರ ಮೊದಲ ಕನ್ನಡ ಪುಸ್ತಕ 'ಆಮಲನಕಥೆ" ಪ್ರಕಟವಾಯಿತು. ಇದರಲ್ಲಿ 190 ಚೌಪದಿಗಳಿವೆ. ಇದೊಂದು ಕಾವ್ಯಕೃತಿ 1924ರಲ್ಲಿಯೇ ಕುವೆಂಪು ಮಹಾರಾಜ ಕಾಲೇಜಿನ ವಿದ್ಯಾರ್ಥಿಯಾದರು. ಅಲ್ಲಿ ಇವರಿಗೆ ಕನ್ನಡದ ಕಣ್ವ ಬಿ.ಎಂ. ಶ್ರೀಕಂಠಯ್ಯ, ಟಿ.ಎಸ್. ವೆಂಕಣ್ಣಯ್ಯ ಹಾಗೂ ಪ್ರಾಧ್ಯಾಪಕ ಎ.ಆರ್. ಕ್ರಷ್ಣಶಾಸ್ತ್ರಿಗಳ ಪ್ರೀತಿ, ವಾತ್ಸಲ್ಯ, ಪ್ರೋತ್ಸಾಹ, ಮಾರ್ಗದರ್ಶನಗಳು ಲಭ್ಯವಾದವು. ಆಗ ಅವರ ಕನ್ನಡಾಭಿಮಾನ ಪತ್ತಷ್ಟು ಪ್ರಖರವಾಯಿತು. ಬಿ.ಎ. ಪರೀಕ್ಷೆಗೆ ತತ್ವಶಾಸ್ತ್ರ ಪರಿಣತಿಯನ್ನು ಅರಿತಿದ್ದ ತತ್ವಶಾಸ್ತ್ರ ಪ್ರಾಧ್ಯಾಪಕರು ತತ್ವಶಾಸ್ತ್ರದಲ್ಲಿ ಎಂ.ಎ ಓದಲು ಸೂಚಿಸಿದರು. ಆದರೆ ಪುಟ್ಟಪ್ಪನವರು ತಳಕಿನ ವೆಂಕಣ್ಣಯ್ಯನವರ ಮಾಥಿಗೆ ಕಟ್ಟುಬಿದ್ದು ಎಂ.ಎ. ಕನ್ನಡ ತರಗತಿ ಸೇರಿದರು. (1928 ರಲ್ಲಿ)

1924ರಲ್ಲಿ ನಡೆದ ಹೈಸ್ಕೂಲಿನ ವಾರ್ಷಿಕೋತ್ಸವದಲ್ಲಿ, ವಾರ್ಷಿಕೋತ್ಸವದ ಬಗ್ಗೆ ಆಂಗ್ಲಭಾಷೆಯಲ್ಲಿ ತಾವು ರಚಿಸಿದ ಕವನವನ್ನು ಪುಟ್ಟಪ್ಪ ಓದಿದರು. ಆ ಸಮಾರಂಭ ಅಧ್ಯಕ್ಷತೆ ವಹಿಸಿದ್ದ, ಮಹಾರಾಜ ಕಾಲೇಜಿನಲ್ಲಿ ಇತಿಹಾಸ ಪ್ರಾಧ್ಯಾಪಕರಾಗಿದ್ದ ಡಾ. ಎಂ.ಎಚ್. ಕೃಷ್ಣಯ್ಯಂಗಾರ್ ಅವರು ತಮ್ಮ ಅಧ್ಯಕ್ಷಭಾಷಣದಲ್ಲಿ ಆ ಕವನಮದ ಬಗ್ಗೆ ಪ್ರಶಂಸಿಸಿದರು. ಅಲ್ಲದೆ ಐರಿಷ್ ಕವಿ Janes cousins ಎಂಬುವವರು ಮೈಸೂರಿಗೆ ಬರಲಿರುವರೆಂದೂ, ಆಗ ಅವರನ್ನು ಸಂದರ್ಶಿಸಿ ಅವರಿಂದ ಮಾರ್ಗದರ್ಶನ ಪಡೆಯುವುದರಿಮದ ಪ್ರಯೋಜನ ಆಗುವುವೆಂದೂ ಸೂಚಿಸಿದರು. ಅದರ ಪ್ರಯೋಜನ ಆಗುವುದೆಂದೂ ಸೂಚಿಸಿದರು. ಅದರಂತೆಯೇ ಕವಿ Janes cousins ಮೈಸೂರಿಗೆ ಬಂದಾಗ ಅವರನ್ನು ಕಂಡು ಅವರಿಗೆ ತಾವು ಬರೆದ ಆಂಗ್ಲ ಕವನಗಳ ಹಸ್ತ ಪ್ರತಿಯನ್ನು "Beginner's Muse" ಎಂಬ ಅಚ್ಚಾದ ಕವನ ಸಂಕಲನವನ್ನು ತೋರಿಸದರು. ಅದನ್ನು ನೋಡಿದ ಕವಿ Janes cousins ಪುಟ್ಟಪ್ಪನವರ ಕವನಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದರಲ್ಲದೆ ಅವರನ್ನು ಕನ್ನಡದಲ್ಲಿ ಬರೆದರೆ ಅಧಿಕ ಶ್ರೇಯಸ್ಸು ದೊರೆಯುತ್ತದೆ. ಎಂದು ಅಭಿಪ್ರಾಯಪಟ್ಟರು. ಇದು ಪುಟ್ಟಪ್ಪನವರ ಬರವಣಿಗೆಗೆ ಹೊಸ ತಿರುವನ್ನು ಕೊಟ್ಟಿತು. ಅಂದಿನಿಂದ ಪುಟ್ಟಪ್ಪನವರ ಕಾವ್ಯಜೀವನದಲ್ಲಿ ಹೊಸ ಅಧ್ಯಾಯ ಪ್ರಾರಂಭವಾಯಿತು ಎನ್ನಬಹುದು. ಮೊದಮೊದಲು ತಾವು ಬರೆದ ಆಂಗ್ಲ ಕವನಗಳನ್ನು ಕನ್ನಡಕ್ಕೆ ಪರಿವರ್ತಿಸತೊಡಗಿದರು. ಆಂಗ್ಲ ಪದ್ಧತಿಯನ್ನು ಅನುಸರಿಸಿ ಕನ್ನಡದಲ್ಲಿ ಕವನಗಳನ್ನು ರಚಿಸತೊಡಗಿದರು.

ಎಂಟ್ರೆನ್ಸ್ ತರಗತಿಯಲ್ಲಿ ಜೀವಶಾಸ್ತ್ರ–ರಾಸಾಯನಶಾಸ್ತ್ರಗಳನ್ನು ಐಚ್ಛಿಕ ವಿಷಯಗಳನ್ನಾಗಿ ಆರಿಸಿಕೊಂಡಿದ್ದ ಅವರು 1924 ಮನಃಶಾಸ್ತ್ರ ಮತ್ತು ತತ್ವಶಾಸ್ತ್ರಗಳನ್ನು ಐಚ್ಛಿಕ ವಿಷಯಗಳನ್ನಾಗಿ ಆರಿಸಿಕೊಂಡು ಬಿ.ಎ. ಪದವಿ ಪಡೆಯಲು ಮಹಾರಾಜ ಕಾಲೇಜನ್ನು ಸೇರಿದರು. 1927ರಲ್ಲಿ ಬಿ.ಎ. ಮಾಡಿಕೊಂಡರು. ಕುವೆಂಪು ಅವರ ತತ್ವಶಾಸ್ತ್ರ ಪರಿಣತಿಯನ್ನು ಅರಿತಿದ್ದ ತತ್ವಶಾಸ್ತ್ರ ಪ್ರಾಧ್ಯಾಪಕರು ತತ್ವಶಾಸ್ತ್ರದಲ್ಲಿ ಹೆಚ್ಚಿನ ಆಸಕ್ತಿ ತೋರಿಸುತ್ತಿದ್ದರು. ಬಿ.ಎ. ಓದಿದಾಗಲೇ ಪ್ಲೇಟೋ, ಅರಿಸ್ಟಾಟಲ್ರಿಂದ ಹಿಡಿದು ಹೇಗಲ್‌ವರೆಗೆ ಕುವೆಂಪು ಅಧ್ಯಯನ ನಡೆಸಿದ್ದರು. ಬಿ.ಎ. ತರಗತಿಗೆ ಸೇರುವ ವೇಳೆಗೆ ಅವರು ಭಾರತೀಯ ದರ್ಶನಗಳನ್ನೂ ಉಪನಿಷತ್ತುಗಳನ್ನೂ ಅಧ್ಯಯನ ಮಾಡಿದ್ದರು. ಪಾಶ್ಚಾತ್ಯ ಸಾಹಿತ್ಯವನ್ನು ಕಾವ್ಯ ಮೀಮಾಂಸೆಯನ್ನೂ ಆಳವಾಗಿ ಅರಿತಿದ್ದರು. ವರ್ಡ್‌ವರ್ತ್, ಮಿಲ್ಟನ್, ಟೆನಿಸನ್, ಟ್ರಾನಿಂಗ್ ಮೊದಲಾದ ಕವಿಗಳ ಕಾವ್ಯಗಳಲ್ಲಿ

ದಾರ್ಶನಿಕತೆಯನ್ನು ಅರಿತುಕೊಂಡಿದ್ದರು. ಬಿ.ಎ. ತರಗತಿಯಲ್ಲಿದ್ದಾಗ ಮನಃಶಾಸ್ತ್ರವನ್ನೂ ಪಾಶ್ಚಾತ್ಯ ತತ್ವ ಶಾಸ್ತ್ರವನ್ನೂ ಅಮೂಲಾಗ್ರವಾಗಿ ಅಧ್ಯಯನ ಮಾಡಿ ಕರತಲಾಮಲಕವಾಗಿಸಿಕೊಂಡರು.

ಮಹಾರಾಜ ಕಾಲೇಜಿನಲ್ಲಿ ಓದುತ್ತಿದ್ದಾಗಲೊಮ್ಮೆ ಯೂನಿಯನ್ ಸಭಾಂಗಣದಲ್ಲಿ ತಮ್ಮ ಇಂಗ್ಲೆಂಡಿನ ಪ್ರವಾಸಾನುಭವದ ಬಗ್ಗೆ ಭಾಷಣ ಮಾಡುತ್ತಿದ್ದ Dr. D.L Disoula ರವರನ್ನು ಅವರ ಭಾಷಣದ ನಂತರ "What is the position of mysore and mysoreans in the estimate of the Britons?" ಎಂದು ಪ್ರಶ್ನಿಸಿದರು. ಅದಕ್ಕೆ ಡಿಸೋಜ ರವರು ತತ್‌ಕ್ಷಣವೇ "cipher" ಎಂದು ಉತ್ತರಿಸಿದರು. ಇಂದರಿಂದ ಸ್ವಾಭಿಮಾನ ಕೆರಳಿದ ಕುವೆಂಪು ತಮ್ಮ ಕೋಣೆಗೆ ಹೋದ ಮೇಲೆ cipher ಮೇಲೆಯೇ ಕವನವೊಂದನ್ನು ರಚಿಸಿ ಬೆಂಗಳೂರಿನಿಂದ ಪ್ರಕಾಶಿತವಾಗುತ್ತಿದ್ದ 'Delhi mail' ಎಂಬ ಪತ್ರಿಕೆಗೆ ಪ್ರಕಟನೆಗಾಗಿ ಕಳುಹಿಸಿದರು.

1924ರ ಡಿಸೆಂಬರ್ ತಿಂಗಳಿನಲ್ಲಿ ಬೆಳಗಾವಿಯಲ್ಲಿ ನಡೆದ ಕಾಂಗ್ರೇಸ್ ಅಧಿವೇಶನಕ್ಕೆ, ಅಧಿವೇಶನ ನೋಡುವ ಕುತೂಹಲದಿಂದ ಹೋದರು. ಅಲ್ಲಿ ಗಾಂಧೀಜಿಯವರನ್ನು ನೋಡುವುದೇ, ಅವರ ಮುಖ್ಯ ಉದ್ದೇಶವಾಗಿತ್ತು. ಆ ವೇಳೆಗಾಗಲೇ ಅವರಲ್ಲಿ ರಾಷ್ಟ್ರಪ್ರೇಮ ಚಿಗುರೊಡೆದಿತ್ತು. ನಾಡಿನ ಬಗ್ಗೆ ಭಾಷೆಯ ಬಗ್ಗೆ ಒಲವೂ ಮೂಡಿತ್ತು. 1928ರಲ್ಲಿ ಅವರ ಸುಪ್ರಸಿದ್ಧ ಕೃತಿ 'ಬೊಮ್ಮನಹಳ್ಳಿಯ ಕಿಂದರಜೋಗಿ' ಪ್ರಕಟವಾಗಿ ಕುವೆಂಪು ಕನ್ನಡ ನಾಡಿನಲ್ಲೆಲ್ಲ ಮನೆಮಾತಾಗಿದ್ದರು. ಅದೇ ವರ್ಷ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ನಡೆದ ವಿದ್ಯಾರ್ಥಿ ಕವಿ ಸಮ್ಮೇಳನದ ಅಧ್ಯಕ್ಷರಾದರು. 1929ರ ಅಕ್ಟೋಬರ್ ನಲ್ಲಿ ಕೊಲ್ಕತ್ತೆಗೆ ಹೋಗಿ ಗುರು ಮಹಾರಾಜರ ಭೇಟಿ ಮಾಡಿ, ದೀಕ್ಷೆಪಡೆದು ಸ್ವಾಮಿವಿವೇಕಾನಂದರ ಕೊಠಡಿ ದರ್ಶನಪಡೆದರು. ಇದರಿಂಗಾಗಿ ಅವರು ವಿರಕ್ತರಂತೆ ಬ್ರಹ್ಮಚಾರಿಯಾಗಿ ಉಳಿಯುವ ಸಾಧ್ಯತೆಗಳು ಕಂಡುಬಂದವು. ಬಹುಶಃ ಆ ಪ್ರಭಾವದಿಂದ ಅವರು ಹೊರಬಂದು ಲೌಕಿಕದಲ್ಲಿ ಬರೆಯಲು ಏಳೆಂಟು ವರ್ಷಗಳೇ ಹಿಡಿದವು. 1929ರಲ್ಲಿ ಕುವೆಂಪು ಕನ್ನಡ ಎಂ.ಎ. ಮುಗಿಸಿದರು.

## ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಕುವೆಂಪು

ಕುವೆಂಪು ಮಹಾರಾಜ ಕಾಲೇಜನ್ನು ಪ್ರವೇಶಿಸಿದ ಕಾಲ ಆ ಸಂಸ್ಥೆ ಭಾಗ್ಯದ ಒಂದು ಕಾಲ. ಕನ್ನಡ ಸಾಹಿತ್ಯಕ್ಕೆ ಆಧುನಿಕ ಯುಗವನ್ನು ಪ್ರವೇಶ ಮೂಡಿಸಿದ ಪುಣ್ಯ ಪುರುಷರಲ್ಲಿ ಒಬ್ಬರಾದ ಬಿ.ಎಂ. ಶ್ರೀಕಂಠಯ್ಯನವರು ಅಲ್ಲಿ ಇಂಗ್ಲಿಷ್ ಪ್ರೊಫೆಸರು. ಅವರ ಕನ್ನಡಾಭಿಮಾನ ಗಾಢಾವಾಗಿದ್ದ ಕ್ರಿಯಾಶೀಲವಾದದ್ದು. ಕನ್ನಡ ಸಾಹಿತ್ಯದ ಅಶ್ವಿನೀದೇವತೆಗಳನ್ನನಕೊಂಡ. ಟಿ.ಎಸ್. ವೆಂಕಣ್ಣಯ್ಯನವರು, ಎ.ಆರ್. ಕೃಷ್ಣಶಾಸ್ತ್ರಿಗಳು, ತತ್ವಶಾಸ್ತ್ರದಲ್ಲಿ ವಿಶೇಷ ಉದ್ದತ್ತನ್ನು ಪಡೆದಿದ್ದ ಎ.ಆರ್. ವಾಡಿಯಾ, ಇವರಲ್ಲಿ ಕಾಲೇಜಿನ ಗುರುಪಂಕ್ತಿಯಲ್ಲಿದ್ದರು. ಇದೇ ಕಾಲದಲ್ಲಿ ಗಾಂಧೀಜಿಯವರ ಮಾರ್ಗದರ್ಶನದಲ್ಲಿ ಸ್ವಾತಂತ್ರ್ಯ ಹೋರಾಟ ತೀವ್ರಗೊಳ್ಳುತ್ತಿತ್ತು. ನಾಡಿಗೆ ಹೊಸ ಚಿಂತನೆಯನ್ನು ತರುತ್ತಿತ್ತು. ಕನ್ನಡ ಸಾಹಿತ್ಯವು ಹೊಸ ಯುಗದ ಹೊಸ್ತಿಲ ಮೇಲೆ ಪಾದವನ್ನಿರಿಸಿದ್ದು, ಯುವಕರಲ್ಲಿ ಹುರುಮು, ಆತ್ಮವಿಶ್ವಾಸ ತುಂಬಿ ತುಳುಕುತ್ತಿತ್ತು.

1927ರಲ್ಲಿ ಮಹಾರಾಜ ಕಾಲೇಜಿನಿಂದ ಬಿ.ಎ. ಪಡೆದ ಕುವೆಂಪು ಅಲ್ಲಿಯೇ ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಿ 1929ರಲ್ಲಿ ಎಂ.ಎ. ಪದವಿ ಪಡೆದರು. ಅದೇ ಕಾಲೇಜಿನ ಕನ್ನಡ ಉಪನ್ಯಾಸಕರಾಗಿ ಅದೇ ವರ್ಷ ವಿಶ್ವವಿದ್ಯಾನಿಲಯವನ್ನು ಪ್ರವೇಶಿಸಿದರು. ಉದ್ಯೋಗ ಕ್ಷೇತ್ರದಲ್ಲಿ ಅವರು ಅದೃಷ್ಟವಂತರು. ಎರಡು ವರ್ಷ ಕಾಲ ಬಿಟ್ಟು ಅವರು ಇಡೀ ವೃತ್ತಿ ಜೀವನ ಮೈಸೂರಿನಲ್ಲಿಯೇ ನಡೆಯಿತು. 1939ರಲ್ಲಿ ಕನ್ನಡ ಅಸಿಸ್ಟೆಂಟ್ ಪ್ರೊಫೇಸರ್ ಆದರು. 1946ರಲ್ಲಿ ಪ್ರೊಫೇಸರ್ ಆದರು. 1955ರಲ್ಲಿ ಮಹಾರಾಜ ಕಾಲೇಜಿನ ಪ್ರಿನ್ಸಿಪಾಲರಾದರು. 1956ರಿಂದ 1960ರವರೆಗೆ ಮೈಸೂರು ವಿಶ್ವವಿದ್ಯಾಲಯದ ಉಪ ಕುಲಪತಿ ಆದರು. ಮಹಾರಾಜ ಕಾಲೇಜಿಗೆ ಪ್ರಿನ್ಸಿಪಾಲರಾದ ಮೊದಲನೆ ಕನ್ನಡ ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾಲಯದ ಉಪ ಕುಲಪತಿಗಳಾದ ಮೊದಲನೆಯ ಕನ್ನಡ ಪ್ರಾಧ್ಯಾಪಕರು.

ಕುವೆಂಪು ಅವರು 1936ರಲ್ಲಿ ದೇವಾಂಗಿಯ ರಾಮಣ್ಣ, ಗೌಡರ ಮಗಳು ಹೇಮಾವತಿರವರನ್ನು ಮದುವೆಯಾದರು. ಕುವೆಂಪುರವರಿಗೆ ಅನುರೂಪರಾದ ಸತಿ ಈಕೆ, ಇಬ್ಬರಿಗೂ ಈ ವಿವಾಹದಿಮದ ಅದೃಷ್ಟ ಒಲಿಯಿತು. ಈ ದಂಪತಿಗೆ ಇಬ್ಬರು ಗಂಡು ಮಕ್ಕಳು, ಇಬ್ಬರು ಹೆಣ್ಣು ಮಕ್ಕಳು. ಈ ಮಾದರಿ ಸತಿ 1982 ಸೆಪ್ಟೆಂಬರ್ 15ರಂದು ನಿಧನರಾದರು.

## ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕನ್ನಡ ಸಾಹಿತ್ಯ ಸಾಧನೆಗಳು :

ಕುವೆಂಪು ಅವರ ಸಾಹಿತ್ಯ ಕೃಷಿ 1922ರಲ್ಲಿ 'ಬಿಗಿನರ್ಸ್ ಮ್ಯೂಸ್' ಎಂಬ ಇಂಗ್ಲಿಷ್ ಕವನ ಸಂಕಲನದೊಂದಿಗೆ ಆರಂಭಗೊಂಡಿತು. ಇವರು ಕನ್ನಡದಲ್ಲಿ 'ಅಮಲನ ಕಥೆ' ಎಂಬ ಮೊದಲ ಕೃತಿಯನ್ನು ರಚಿಸಿದರು. ಇದು 1924ರಲ್ಲಿ ಪ್ರಕಟವಾಯಿತು. ಇಲ್ಲಿಂದ ಆರಭಗೊಂಡ ಕಾವ್ಯ, ಕವಿತೆ, ನಾಟಕ, ಕಥೆ, ಕಾದಂಬರಿ, ವಿಮರ್ಶೆ ಜೀವನಚರಿತ್ರೆ, ಶಿಶು ಸಾಹಿತ್ಯ, ಪ್ರಬಂಧ, ಭಾಷಣ, ಅನುವಾದ ಮೊದಲಾದ ಸಾಹಿತ್ಯ ಪ್ರಕಾರಗಳಲ್ಲಿ ಅಮೂಲ್ಯ ಕೃತಿಗಳನ್ನು ರಚಿಸಿದರು.

**ಕಾವ್ಯ / ಕವಿತೆಗಳು :**

ಪ್ರಕೃತಿಯಲ್ಲಿ ಕಂಡುಂಡ ಅನೇಕ ಜೀವನಾನುಭವಗಳೊಂದಿಗೆ ಆಧ್ಯಾತ್ಮ, ಕ್ರಾಂತಿ, ಸೌಂದರ್ಯ, ಜಿಜ್ಞಾಸೆ, ದಾಂಪತ್ಯ, ಪ್ರೇಮ, ಕಥನ ಕವನ, ಶಿಶುಗೀತೆ, ವಿಡಂಬನೆ ಮೊದಲಾದವುಗಳನ್ನು ತಮ್ಮ ಕವಿತೆಗಳ ಮೂಲಕ ಕುವೆಂಪು ಪ್ರತಿ ಸೃಷ್ಟಿಸಿದ್ದಾರೆ.

ಅಗ್ನಿ ಅಂಶ, ಅನಿಕೇತನ, ಅನುತ್ತರಾ, ಅಮಲನಕಥೆ, ಇಕ್ಷುಗಂಗೋತ್ರಿ, ಕಥನ ಕವನಗಳು, ಕದರಡಕೆ, ಕನ್ನಡ ಡಿಂಡಿಮ ಕನ್ನಿಗನ ಕೈಬುಟ್ಟಿ, ಕಲಾಸುಂದರಿ, ಕಿಂಕಣ, ಕುಟೀಚರ, ಕೃತ್ತಿಕ, ಕೊನೆಯ ತೆನೆ ಮತ್ತು ವಿಶ್ವಮಾನವ ಸಂದೇಶ, ಕೊಳಲು ಕೋಗಿಲೆ ಮತ್ತು ಸೋವಿಯತ್ ರಷ್ಯಾ, ಚಂದ್ರಮಂಚಕೆ ಬಾ ಚಕೋರಿ, ಚಿತ್ರಂಗದಾ, ಜೇನುಗುವಾ, ನವಿಲು, ಪಕ್ಷಿಕಾಶಿ, ಪಾಂಚಜನ್ಯ, ಪ್ರಾಥನಾ ಗೀತಾಂಜಲಿ, ಪ್ರೇಕಕ್ಯೂ, ಪ್ರೇಮಕಾಶ್ಮೀರ, ಮಂತ್ರಾಕ್ಷತೆ, ಸಮುದ್ರಲಂಘನ, ಶ್ರೀ ರಾಮಾಯಣದರ್ಶನಂ, ಷೋಡಶಿ, ಹಾಳೂರು, ಹೊನ್ನ ಹೊತಾರೆ ಇವೆಲ್ಲವೂ ಕುವೆಂಪು ಅವರ ಕಾವ್ಯ ಕೃತಿಗಳಾಗಿವೆ.

**ಕಾಥಾ ಸಂಕಲನಗಳು :** ನನ್ನ ದೇವರು ಮತ್ತು ಇತರೆ ಕಥೆಗಳು, ಸನ್ಯಾಸಿ ಮತ್ತು ಇತರ ಕಥೆಗಳು ಇವು ಕುವೆಂಪು ಅವರ ಕಥಾ ಸಂಕಲನಗಳು.

**ಕಾದಂಬರಿಗಳು :** ಕುವೆಂಪು ಕನ್ನಡದ ಶ್ರೇಷ್ಠ ಕಾದಂಬರಿಕಾರರಲ್ಲಿ ಒಬ್ಬರು. ಅವರ ಕಥಾರಚನಾ ಕೌಶಲ್ಯಕ್ಕೆ ಸಾಕ್ಷಿಯೆಂದರೆ, ಕಾನೂರು ಹೆಗ್ಗಡತಿ ಮತ್ತು ಮಲೆಗಳಲ್ಲಿ ಮದುಮಗಳು ಕಾದಂಬರಿಗಳು. ಇವು ಕನ್ನಡ ಸಿನಿಮಾಗಳಾಗಿಯೂ ನಿರ್ಮಾಣಗೊಂಡು ದೃಶ್ಯ ಮಾಧ್ಯಮಗಳಾಗಿವೆ.

**ನಾಟಕಗಳು :** ಕುವೆಂಪು ನಾಟಕ ಸಾಹಿತ್ಯ ರಚಿಸುವ ಮೂಲಕ ತಮ್ಮ ಕರ್ತೃ ಶಕ್ತಿಯನ್ನು ಕನ್ನಡಿಗರ ಮುಂದಿಟ್ಟದ್ದಾರೆ. ಕಾನೀನ, ಚಂದ್ರಹಾಸ, ಜಲಗಾರ, ಬಲಿದಾನ, ಬಿರುಗಾಳಿ, ಬೆರಳ್‌ಗೆ ಕೊರಳ್, ಮಹಾರಾತ್ರಿ, ಯಮನ ಸೋಲು, ರಕ್ತಾಕ್ಷಿ, ವಾಲ್ಮಿಕಿಭಾಗ್ಯ, ಶೂದ್ರ ತಪಸ್ವಿ, ಸ್ಮಶಾನ ಕುರುಕ್ಷೇತ್ರ, ನನ್ನ ಗೋಪಾಲ, ಮೋಡಣ್ಣನ ತಮ್ಮ ಇವು ಇವರ ನಾಟಕಗಳಾಗಿವೆ.

**ಶಿಶು ಸಾಹಿತ್ಯ :** ನನ್ನ ಗೋಪಾಲ (ನಾಟಕ) , ನನ್ನ ಮನೆ, ನರಿಗಳಿಗೇಕೆ ಕೋಡಿಲ್ಲ, ಬೊಮ್ಮನಹಳ್ಳಿಯ ಕಿಂದರಿಜೋಗಿ, ಮರಿವಿಜ್ಞಾನಿ, ಮೇಘಪುರ, ಮೋಡಣ್ಣನ ತಮ್ಮ (ನಾಟಕ)

**ಖಂಡಕಾವ್ಯ :** ಚಿತ್ರಾಂಗದ

**ಕಥನ ಕವನಗಳು :** ಸಬಗ್ಗಗೀನ್, ತಾನಾಜಿ,

**ಪ್ರಬಂಧ ಸಂಕಲನ :** ಮಲೆನಾಡಿನ ಚಿತ್ರಗಳು

**ವಿಮರ್ಶಾಗ್ರಂಥಗಳು :** ರಸೋವೈಸಃ, ದ್ರೌಪದಿಯ ಶ್ರೀಮುಡಿ, ತಪೋನಂದನ, ವಿಭೂತಿ ಪೂಜೆ, ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ, ಷಷ್ಠಿ ನಮನ, ಕಾವ್ಯ ವಿಹಾನ

ಪ್ರಬಂಧಗಳು : ಕತೆಗಳೊಡನೆ ಆರಂಭದಲ್ಲಿ, ಜನತಾ ಪ್ರಜ್ಞೆ ಮತ್ತು ವೈಚಾರಿಕ ಜಾಗೃತಿ, ಮಂತ್ರ ಮಾಂಗಲ್ಯ, ಮನುಜಮತ ವಿಶ್ವಪಥ, ಮಹಾದರ್ಶನ ಮತ್ತು ಪ್ರಾಯಶ್ಚಿತ್ತ ಮುನ್ನುಡಿ ತೋರಣ.

**ಭಾಷಣಗಳು** : ರಾಷ್ಟ್ರಕವಿ ಭಾಷಣಗಳು – ಸಂಪಾದಕರು ದೆ.ಜ.ಗೌ. ವಿಚಾರ ಕ್ರಾಂತಿಗೆ ಆಹ್ವಾನ ಶ್ರೀ ಕುವೆಂಪು ಭಾಷಣಗಳು.

**ಬಿನ್ನ ವಿತ್ತಳೆಗಳು** : ಸಂಪಾದಕರು ಕೋ. ಚೆನ್ನಬಸಪ್ಪ ಸಾಹಿತ್ಯ ಪ್ರಚಾರ

**ಜೀವನ ಚರಿತ್ರೆಗಳು** : ಸ್ವಾಮಿ ವಿವೇಕಾನಂದ ಮತ್ತು ರಾಮಕೃಷ್ಣ ಪರಮಹಂಸ,

**ಅನುವಾದ ಸಾಹಿತ್ಯ** : ಗುರುವಿನೊಡನೆ ದೇವರೆಡೆಗೆ – ಭಾಗ – 1 ಮತ್ತು ಭಾಗ – 2, ವೇದಾಂತ, ಜನಪ್ರಿಯ ವಾಲ್ಮೀಕಿ ರಾಮಾಯಣ.

**ಪ್ರಶಸ್ತಿಗಳು** : 1955ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಮತ್ತು 1968ರಲ್ಲಿ ಭಾರತೀಯ ಜ್ಞಾನಪೀಠ ಪ್ರಶಸ್ತಿ ('ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯಕ್ಕೆ) ಪದ್ಮ ಭೂಷಣ ಪ್ರಶಸ್ತಿ (1958), ಪಂಪ ಪಶಸ್ತಿ (1988 ಕರ್ನಾಟಕ ರತ್ನಪ್ರಶಸ್ತಿ (1922)

**ಬಿರುದುಗಳು** : ರಾಷ್ಟ್ರಕವಿ, ರಸಋಷಿ, ಗೌರವ ಡಿ.ಲಿಟ್, 19563ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ, 1969ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದಿಂದ, 1976ರಲ್ಲಿ ಕಾನ್ಪೂರ ವಿಶ್ವವಿದ್ಯಾನಿಲಯದಿಂದ ಗೌರವ ಡಾಕ್ಟರೇಟ್ ಪದವಿಯನ್ನು ಪಡೆದಿದ್ದಾರೆ.

**ಅಭಿನಂದನಾ ಗ್ರಂಥಗಳು** : ಕುವೆಂಪು ಅವರಿಗೆ 1968ರಲ್ಲಿ 'ಗಂಗೋತ್ರಿ', 1975ರಲ್ಲಿ 'ಸಹ್ಯಾದ್ರಿ ಹಾಗೂ ಉಡುಗೊರೆ ಮೊದಲಾದ ಅಭಿನಂದನ ಗ್ರಂಥಗಳನ್ನು ಅರ್ಪಿಸಿ ಗೌರವಿಸಲಾಯಿತು.

**ಗೌರವ ಅಧ್ಯಕ್ಷತೆ** : ಧಾರವಾಡದಲ್ಲಿ ನಡೆದ 39ಬೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದ್ದರು.

## ಕೆಳವರ್ಗದ ಬದುಕನ್ನು ಚಿತ್ರಿಸುವಲ್ಲಿ ಕುವೆಂಪುರವರ ಪಾತ್ರ

ಕನ್ನಡದ ಪ್ರಖ್ಯಾತ ಕವಿಯರಲ್ಲೊಬ್ಬರಾದ ಕುವೆಂಪುರವರು ತಮ್ಮ ಜಿವನದಲ್ಲಿ ಕೀರ್ತಿ ಸಾಧನೆಗಳನ್ನು ಇತರ ಕವಿಗಳಿಗಿಂತ ಶ್ರೇಷ್ಠ ಎನಿಸಿದ್ದಾರೆ. ಏಕೆಂದರೆ ನಾಲ್ಕು ವರ್ಗಗಳು ಶ್ರೇಷ್ಠ ಯಾವುದು? ಕನಿಷ್ಟಯಾವುದು? ಎಂಬ ಬದುಕನ್ನು ರೂಪಿಸಿಕೊಳ್ಳುವಲ್ಲಿ ಕೆಲವು ಕವಿಗಳು ತಮ್ಮದೇ ಅದಂತಹ ಬರಹಗಳನ್ನು ರಚಿಸಿದ್ದಾರೆ. ಆದರೆ ಇಲ್ಲಿ ಕುವೆಂಪುರವರು ದಲಿತರ ಬದುಕನ್ನು ಒಂದು ಯತಾಸ್ಥಿತಿಗೆ ಕೊಂಡೊಯ್ಯುವಲ್ಲಿ ಸಫಲರಾಗಿದ್ದಾರೆ. ಅಂದಿನ ಕಾಲಕ್ಕೆ ಕನ್ನಡದಲ್ಲಿ ಮೇಲ್ವರ್ಗವೆನಿಸಿದಂತಹ ಬ್ರಾಹ್ಮಣವರ್ಗವೂ ಮೇಲುಗೈ ಸಾಧಿಸಿದೆ ಎಂದು ಹೇಳಬಹುದು. ಇದಕ್ಕೆ ಕೆಲವು ರೀತಿಯ ಉದಾಹರಣೆಗಳನ್ನು ನೀಡಬಹುದು ಕುವೆಂಪು ಅವರು 'ಶೂದ್ರ ತಪಸ್ವಿ' ನಾಟಕವನ್ನು ಬರೆದ ಪುರಾಣ ಕತೆಯನ್ನು ಒಂದು ಕಾಲಾನುಕ್ರಮಕ್ಕೆ ಬದಲಾಯಿಸಿದರು ಎಂಬ ವಿಚಾರಕ್ಕೆ ಕೆಲವು ಕವಿಗಳು ಕುವೆಂಪು ಅವರ ಮೇಲೆ ದಬ್ಬಾಳಿಕೆಯನ್ನು ಕಾಣಬಹುದು ಅದಕ್ಕೆ ಸರಿಯಾಗಿ ಅವರು ತಮ್ಮ ಕೃತಿಗಳಲ್ಲಿ ಬರಹಗಳಿಂದ ಹಾಗೂ ವಸ್ತುವಿಷಯವನ್ನು ರೂಪಿಸತಕ್ಕ ಉತ್ತರ ನೀಡಿದ್ದಾರೆ.

ಕುವೆಂಪುರವರು ತಮ್ಮ ಕೃತಿಗಳಲ್ಲಿ ನಾಲ್ಕುವರ್ಗಗಳನ್ನು ಮೀರುಸುವಂತಹ ಪಾತ್ರ ಎಂದರೆ ದಲಿತ ಎಂಬುದು ಅಸ್ಪೃಶ್ಯರು ಎಂಬ ಮನೋಭಾವನೆ ತಾಳುತ್ತವೆ. ಇಂತಹ ಒಂದು ಜನಾಂಗವನ್ನು ಅಂದಿನ ಕಾಲಕ್ಕೆ ಪ್ರಖ್ಯಾತ ಕವಿಯೊಬ್ಬರಾದಂತಹ ಕುವೆಂಪುರವರು ತಮ್ಮ ಕೃತಿಗಳಲ್ಲಿ ಒಂದು ಚೌಕಟ್ಟಿನಲ್ಲಿ ಚಿತ್ರಿಸಿದ್ದಾರೆ.

ಉದಾಹರಣೆಗೆ : ಕುವೆಂಪುರವರ ಕೃತಿಗಳಲ್ಲಿ ದಲಿತ ಜೀವನ ಚಿತ್ರವನ್ನು ಚಿತ್ರಿಸುವ ಮೊದಲು ಅವುಗಳಲ್ಲಿ ಸಾಮಾಜಿಕ ಜಾತಿ ವ್ಯವಸ್ಥೆ ಮತ್ತು ವರ್ಗ ಸ್ವಭಾವಗಳನ್ನು ತಿಳಿಯಬೇಕಿದೆ.

1. ಬ್ರಾಹ್ಮಣರು
2. ಗೌಡರು
3. ಮುಸ್ಲಿಮರು
4. ಕ್ರಿಶ್ಚಿಯನ್ನರು

ಬ್ರಾಹ್ಮಣರು ಮೈ ಬಗ್ಗಿಸಿ ದುಡಿಯುವವರಲ್ಲಿ ಹಳ್ಳಿಗರಿಗೆ ಮೌಢ್ಯತೆಯನ್ನು ಉಪದೇಶಮಾಡಿ ಮಂತ್ರಗಳನ್ನು ಹೇಳುವುದು. ತೀರ್ಥನೀಡುವುದು ಪೂಜೆ–ಪುರಸ್ಕಾರಗಳನ್ನು ಮಂಡಿಸುವುದು ಇನ್ನಿತರ

ಕಾರ್ಯಗಳನ್ನು ಮಾಡುವುದು ಅವರ ವೃತ್ತಿ ಜೀವನವಾಗಿರುತ್ತದೆ. ಅದರಂತೆ ಆರೋಗ್ಯ ಹದಗೆಟ್ಟದೆ ಅಲ್ಲಿ ಔಷಧಿಯನ್ನು ನೀಡುವುದರ ಬದಲು ಇನ್ನಿತರ ದೇವರನ್ನು ಮೊರೆ ಹೋಗುವುದು ಇತರ ಜನರನ್ನು ಶೋಷಿಸುವ ಮನೋಭಾವನೆ ಎಂದು ತಿಳಿಯಬೇಕು.

ಒಕ್ಕಲಿಗರು ಅಥವಾ ಗೌಡರೂ ಭೂಮಾಲಿಕರು ತಮ್ಮನ್ನೇ ಬಿಟ್ಟು ಅನ್ಯರ ಭೂ ಮಾಲೀಕರಾಗಕೂಡದೆಂದು ಇವರ ಒಂದು ವಿಚಾರ. ತಮ್ಮ ವಿರುದ್ಧವಾಗಿ ಭೂಸಾಗುವಳಿ ಮಾಡಹೊರಟ ಸೇಸನಾಯ್ಕರ ಮೇಲೆ ಅವರಿಗೆ ಸಿಟ್ಟು ಮೇಲ್ವರ್ಗಬಿಟ್ಟರೆ ಇವರು ಉತ್ತಮ ಜನಾಂಗದವರಾಗಿರುತ್ತಾರೆ. ಕುಂಬಾರರು ಹಳತ್ವದವರು ಇತ್ಯಾದಿ. ಆದರೆ ಇಲ್ಲಿ ದುಡಿಮೆಯೇ ದೇವರೆಂದು ಶ್ರಮಜೀವಿಗಳಂತೆ ದುಡಿಯುವ ವರ್ಗವೆಂದರೆ ಅಸ್ಪೃಶ್ಯರು. ಬ್ರಾಹ್ಮಣವರ್ಗದವರಂತು ತಮ್ಮ ವೃತ್ತಿಕಾರ್ಯದಲ್ಲಿ ಶೋಷಣೆ ಮಾಡುತ್ತಿರುವ ಭಾಗವಾದರೆ ಇನ್ನೊಂದು ಭಾಗ ಗೌಡರು ಆರ್ಥಿಕ ವ್ಯವಸ್ಥೆಯಿಂದ ಶೋಷಣೆ ಮಾಡುವುದಾಗಿದೆ ಏಕೆಂದರೆ ಇಲ್ಲಿ ಕುವೆಂಪು ತಮ್ಮ ಕೃತಿಯಲ್ಲಿ ದಲಿತ ವರ್ಗದವರು ಕೇವಲ ದುಡಿಯುವ ವರ್ಗಕ್ಕೆ ಮಾತ್ರ ಸೀಮಿತರಾಗಿದ್ದಾರೆ ಅಥವಾ ಅವರು ಬಡತನದ ಹಕ್ಕನ್ನು ಪಡೆದು ಇತರಗರ್ವದವರಂತೆ ಬಾಳುವುದು ಸೂಕ್ತವೆನಿಸುವುದು ಓದುಗರಿಗೆ ತಿಳಿಯಬೇಕಿದೆ.

ನಂತರ ಬೌದ್ಧಿಕ, ಮಾನಸಿಕವಾಗಿ ಹಿಂಸೆಯನ್ನು ನೀಡುವಲ್ಲಿ ಕಾರಣಕರ್ತರಾದಂತಹ ಮೇಲ್ವರ್ಗದ ಪಾತ್ರಗಳು ಬಳಸಿಕೊಂಡಿವೆ. ಭಾರತ ದೇಶದಲ್ಲಿ ಹಲವಾರು ರೀತಿಯಲ್ಲಿ ಜಾತಿಗಳಿವೆ. ಆದರೆ ಒಂದು ಜಾತಿಗೆ ಸೇರಿದ ಕವಿ ಮತ್ತೊಂದು ಜಾತಿಯ ಬದುಕು ನೈಜವಾಗಿದೆಯೆ ಅಥವಾ ಅಸಹಜವಾಗಿದೆಯೇ ಎಂಬ ಪ್ರಶ್ನೆಯಾಗುತ್ತದೆ.

ಕುವೆಂಪುರವರು ತಮ್ಮ ಕೃತಿಗಳಲ್ಲಿ ನಂತರ ಜೀವನವನ್ನು ಒಂದು ಕ್ರಿಯಾಶೀಲವಾಗಿ ಚಿತ್ರಿಸಿದ್ದಾರೆ. ಏಕೆಂದರೆ ಅವರು ತಮ್ಮ ಬಾಲ್ಯದಿಂದ ಹಿಡಿದು ಉನ್ನತ ವಿದ್ಯಾಭ್ಯಾಸದವರಗೆ ಆಶ್ರಮದಲ್ಲಿ ಕಳೆದಿದ್ದಾರೆ. ಆದರೆ ಪ್ರಶ್ನೆ ಎಂದರೆ ದಲಿತರ ಅನುಭವಿಸಿ ಕಂಡಂತ ನೋವುಗಳನ್ನುನು ಮಲೆನಾಡಿನಲ್ಲಿ ತಿಳಿದಿರಬಹುದೆಂಬ ನಂಬಿಕೆ.

ಕುವೆಂಪು ಅವರು ತಮ್ಮ ಕಾದಂಬರಿಗಳಲ್ಲಿ ದಲಿತ ಪಾತ್ರ ಚಿತ್ರಣವು ಚಿತ್ರಿಸಿದ್ದಾರೆ. ಕಾನೂರು ಹೆಗ್ಗಡತಿ ಕಾದಂಬರಿಯ ಕೇಂದ್ರ ಪಾತ್ರದ ಹೂವಯ್ಯ ವಿದ್ಯಾವಂತ ತರುಣನಾಗಿದ್ದು ಹಳ್ಳಿಗರ ಮೌಢ್ಯ, ಅಜ್ಞಾನಗಳನ್ನು

ಜಾಗೃತಿಯ ಪ್ರತಿನಿಧಿಯಾಗಿರುವುದನ್ನು ಕಾಣಬಹುದು ಹೂವಯ್ಯ ಪಾತ್ರದ ಮೂಲಕ ವೈಚಾರಿಕ ಮತ್ತು ವೈಜ್ಞಾನಿಕ ದೃಷ್ಟಿಕೋನಗಳು ಪ್ರಕಟವಾಗಿ ಶೋಷಣೆ ತಡೆಯುವ ಪ್ರಯತ್ನಗಳು ಕಾದಂಬರಿಯ ಉದ್ದಕ್ಕೂ ಸಾಗುತ್ತವೆ. ಪುರೋಹಿತಶಾಹಿ ಎಲ್ಲಾ ಶೋಷಣೆಗೆ ಮೂಲ ಎಂಬುದನ್ನು ಗುರುತಿಸಿರುವ ಹೂವಯ್ಯ ಅದರ ವಿರುದ್ಧ ಕಿಡಿ ಕಾಡುವುದನ್ನು ಕಾಣಬಹುದು. ಪುರೋಹಿತಶಾಹಿಯನ್ನು ತಾತ್ವಿಕ ನೆಲೆಯಲ್ಲಿ ಗ್ರಹಿಸುವುದರಿಂದ ಕುವೆಂಪು ಆ ಮೂಲಕ ಯಾವುದೇ ಜಾತಿಯನ್ನು ವಿರೋಧಿಸುವುದಿಲ್ಲ. ಪುರೋಹಿತ ಶಾಹಿಯ ವಿರುದ್ಧದ ಧ್ವನಿಯನ್ನು ಬ್ರಾಹ್ಮಣರ ವಿರುದ್ಧ ಧ್ವನಿಯೆಂದು ತಪ್ಪಾಗಿ ಅರ್ಥೈಸಿದ ಸಂದಭಗಳೂ ಉಂಟು. ಕುವೆಂಪು ವಿಚಾರಗಳು ರಾಮಕ್ರಷ್ಣ ಪರಮಹಂಸ, ವಿವೇಕಾನಂದ, ಗಾಂಧಿ, ಅಂಬೇಡ್ಕರ್ ವಿಚಾರಗಳಿಂದ ಅಷ್ಟೆ ಅಲ್ಲದೇ ಉಪನಿಷತ್ ವಿಚಾರಧಾರೆಗಳಿಂದ ಪ್ರಭಾವಿತರಾಗಿರುವುದನ್ನು ಇಲ್ಲಿ ನೆನೆಯಬೇಕು. ಕುವೆಂಪು ಅವರು ಯಾವುದೇ ಜಾತಿ, ಮತವನ್ನು ಪ್ರೀತಿಸದೆ ಮನುಜ ಮತದ ಪ್ರತಿಪಾದಿತರಾಗಿ ವಿಶ್ವಮಾನವ ತತ್ವವನ್ನು ಸಾರಿದ್ದಾರೆ.

“ಕಾನೂರು ಹೆಗ್ಗಡತಿ”ಯಲ್ಲಿ ಬರುವ ಅಗ್ರಹಾರದ ಜೋಯಿಸರು ಪರೋಹಿತಶಧಾಹಿಯನ್ನು ಪ್ರತಿನಿದಿಸುವ ಪಾತ್ರವಾಗಿದ್ದಾರೆ. ಜೋಯಿಸ್ ವೆಂಕಟಪ್ಪಯ್ಯನ ಪಾತ್ರವನ್ನು ಚಿತ್ರಿಸಿರುವ ರೀತಿ ಗಮನ ಸೆಳೆಯುತ್ತದೆ.,

ತೆಳ್ಳಗೆ ಉದ್ದವಾಗಿದ್ದು, ಎಡಗಣ್ಣು ಹುಬ್ಬು ಹೂ ಕೂತು ಕರುಡಾಗಿದ್ದ ವೆಂಕಟಯ್ಯನವರು ಗೋಡೆಯ ಪಕ್ಕದಲ್ಲಿಟ್ಟದ್ದ ಒಂದು ಮಣಿಯ ಮೇಲೆ ಪದ್ಮಾಸನ ಹಾಕಿ ಕುಳಿತಿದ್ದರು.

ಜೋಯಿಸರ ಒಂದು ಕಣ್ಣು ಕುರುಡಾಗಿತ್ತು. ಎಂಬುದೇ ಪುರೋಹಿತಶಾಹಿಯನ್ನು ಬಿಡದೆ ಅಜ್ಞಾನ ಸುತ್ತುವರಿದಿರುವ ಹಿನ್ನೆಲೆಯನ್ನು ಸೂಚಿಸಲಾಗಿದೆ. ಈ ಸಮಾಜದ ಬಹುಪಾಲು ಜನರನ್ನು ಅಜ್ಞಾನದಲ್ಲಿಡುವುದರ ಮುಖಾಂತರ ಅವರ ಮೂಡನಂಬಿಕೆಗಳನ್ನು ತಮ್ಮ ಲಾಭಕ್ಕೆ ಬಳಸಿಕೊಳ್ಳುವ ಪುರೋಹಿತಶಾಹಿಯ ಬೌದ್ಧಿಕ ಕಸರತ್ತುಗಳೂ ಕೂಡ ಅಜ್ಞಾನದಿಂದಲೇ ಕೂಡಿರುವುದನ್ನು ಕುವೆಂಪು ವ್ಯಂಗ್ಯವಾಗಿ ಚಿತ್ರಿಸಿದ್ದಾರೆ. ದೇಹ ಪರಿಶ್ರಮದ ದುಡಿಮೆಯ ಈ ಜಗತ್ತಿನ ಎಲ್ಲಾ ಸುಖ ಸವಲತ್ತುಗಳನ್ನು ಅನುಭವಿಸುವ ವರ್ಗವಾಗಿ ಅದು ರೂಪುಗೊಂಡಿರುವುದನ್ನು ಇಲ್ಲಿ ಕಾಣಿಸಲಾಗಿದೆ.

ತನ್ನ ಲಾಭಕ್ಕೆ ಮೂಲ ವನದಂತಿದ್ದ ಹಳ್ಳಿಗರ ಮೌಢ್ಯವನ್ನು ನಿವಾರಿಸುವ ಹೂವಯ್ಯನ ಮೇಲೆ ಜೋಯಿಸರಿಗೆ ಮತ್ಸರ ಬೆಳೆಯುತ್ತದೆ. ಚಂದ್ರಯ್ಯಗೌಡರಿಗೆ ಹೇಳುವ ಮಾತುಗಳಲ್ಲಿ ಅದು ವ್ಯಕ್ತವಾಗಿದೆ.

"ನಾನು ಹೇಳಿದ್ದೆ ಈಗಿನ ವಿದ್ಯಾಭ್ಯಾಸ ಹುಡುಗರನ್ನು ಹಾಳುಮಾಡಿಬಿಡುತ್ತದೆ. ಎಂದು ದೇವರು, ದಿಂಡರು ಭಕ್ತಿ ಗಿಕ್ತಿ ಎಲ್ಲ ನಿರ್ನಾಮ. ಜೊತೆಗೆ ನೂರಾರು ಹವ್ಯಾಸಗಳನ್ನು ಬೇರೆ ಕಲಿತು ಬಿಡುತ್ತಾರೆ. ನಿನ್ನ ಮನೆ, ಜಮೀನು ಉಳಿಯಬೇಕಾದರೆ ಅವರು ಓದು ನಿಲ್ಲಿಸಿ ಮದುವೆ ಗಿದುವೆ ಮಾಡಿ ಕೆಲಸಕ್ಕೆ ಹೆಚ್ಚು, ಸಂಸಾರ ತಲೆಗೆ ತಾಗಿದೆರೆ ಆಗ ಬುದ್ಧಿ ಬರುತ್ತದೆ"

ಜೋಯಿಸರಿಗೆ ಭಯ ಏಕೆಂದರೆ ಶೂದ್ರರು ವಿದ್ಯಾವಂತರಾದರೆ ತನ್ನ ಬಂಡವಾಳ ಬಯಲಾಗುತ್ತದೆ ಎಂದು. ಪುರೋಹಿತ ವರ್ಗಕ್ಕೆ ಹೀಗಾಗಿ ಅದು ಮನು ನಿರ್ದೇಶಿತ ಸಾಮಾಜಿಕ ಸೂತ್ರಗಳನ್ನು ಬೆಂಬಲಿಸಿಯೇ ಮಾತಾಡುತ್ತದೆ. ಶಿಕ್ಷಣ ಸಾರ್ವತ್ರಿಕವಾಗಿರುವುದರಿಂದ ಅದು ಮನುಷ್ಯರಲ್ಲಿ ಸಾಮಾಜಿಕ ಪ್ರಜ್ಞೆ ಮೂಡಿಸಿ, ಮನುಷ್ಯನನ್ನು ವಿವೇಕದೆಡೆಗೆ ಮುನ್ನಡೆಸಬಹುದೆಂಬ ಸಕಲ್ಪನೆಗೆ ಪುರೋಹಿತಶಾಹಿ ವಿರುದ್ಧವಾಗಿರುವುದನ್ನು ಕುವೆಂಪು ಸೂಚಿಸಿದ್ದಾರೆ.

ಕಾದಂಬರಿಯ ಮೊದಲು ಹೂವಯ್ಯನು ಗಾಡಿಯಿಂದ ಬಿದ್ದು ಟ್ರಂಕು ತಗುಲಿ ಗಾಯಗೊಂಡಿರುತ್ತಾನೆ. ಆಗ ಬೀಗರಾದ ಶಾಮಯ್ಯಗೌಡರ ಮನೆಯಲ್ಲಿ ಆರೈಕೆ ಮಾಡಿಸಿಕೊಳ್ಳುವಾಗ ವೆಂಕಪ್ಪಯ್ಯ ಜೋಯಿಸರು ಅಲ್ಲಿಗೆ ಬಂದು ಹೂವಯ್ಯನ ಬೆನ್ನು ನೊವಿನ ನಿವಾರಣೆಗೆ ಬೂದಿ, ಕುಂಕುಮ ಹಚ್ಚಿ ಬಂದು ಶಾಮಯ್ಯಗೌಡರಿಗೆ ಸಲಹೆ ಮಾಡುತ್ತಾರೆ. ಆಗ ಸಲಹೆಯನ್ನು ಖಂಡಿಸುತ್ತ ಹೂವಯ್ಯ ಜೋಯಿಸರಿಗೆ ಹೇಳುವ ಮಾತು ಈಗಿದೆ.

"ನೀವು ತಿಳಿದವರು ಎಂದು ಕೊಂಡೆ ಹಳ್ಳಿಯವರಿಗೆ ಮೌಢ್ಯ ಉಪದೇಶ ಮಾಡಿ ಟ್ರಂಕು ತಗುಲಿ ಬೆನ್ನು ನೋವಾಗದಿದ್ದರೆ ಔಷಧಿ ಮಾಡಿ ಎಂದು ಹೇಳುವ ಬದಲ ಬೂದಿ, ಕುಂಕುಮ, ಹಚ್ಚಿ ಮಂತ್ರಹಾಕಿಸಿ ಎಂದು ಹೇಳುವರೆಲ್ಲಾ ಇದು ಯಾವ ತತ್ವಶಾಸ್ತ್ರವಲ್ಲ ಹೇಳಿದೆ? ಹುಟ್ಟನಿಂದ ಸಾವಿನವರೆಗೆ ಮದುವೆಯಿಂದ ಮಸಣದವರೆಗೆ ಜನಜೀವನದಲ್ಲಿ ಪ್ರತಿಯೊಂದಕ್ಕೂ ಮಾರ್ಗದರ್ಶನವೆಂದು ಪುರೋಹಿತರು ಓಡಾಡುವುದನ್ನು ಕಾಣುತ್ತವೆ. ಅನಕ್ಷರಸ್ಥ ಜನಗಳಿಗೆ, ವೈದ್ಯರಾಗಿ, ಮಂತ್ರವಾದಿಗಳಾಗಿ, ಭವಿಷ್ಯಗಾರರಾಗಿ, ಪೂಜಾರಿಗಳಾಗಿ, ಧರ್ಮಗುರುಗಳಾಗಿ, ಕಾಣಿಸಿಕೊಳ್ಳುವ ಇವರು ಸ್ವತಃ ಅಜ್ಞಾನಿಗಳಾಗಿದ್ದುಕೊಂಡು ಜನಗಳಿಗೆ ಅಜ್ಞಾನವನ್ನು

ಬೋಧಿಸುವ ಕಾರ್ಯತಂತ್ರ ಇಲ್ಲಿ ಸ್ಪಷ್ಟವಾಗಿದೆ. ಮಲೆನಾಡಿನ ಚಿತ್ರಗಳ ಕೃತಿಯಲ್ಲಿ ಕೆಳವರ್ಗದ ಸಮುದಾಯವನ್ನು ಕುವೆಂಪುರವರು ತುಂಬಾ ಶ್ರದ್ಧ ಪಾತ್ರವನ್ನು ಹೆಣೆದಿದ್ದಾರೆ. ಅದರಲ್ಲಿ ಹಿರಿಗ ಎಂಬ ಕೀಳುಜಾತಿಯವನು ಮೇಲುಜಾತಿಯವರು ಅವನನ್ನು ಹಿರಿಯಣ್ಣ ಎಂಬ ವಾಡಿಕೆ ಇತ್ತು. ಇವನು ಕೀಳುಜಾತಿಯಾದರು ಸಹ ಇವನನ್ನು ಕಂಡರೆ ಎಲ್ಲರಿಗೂ ಎಲ್ಲಿಲ್ಲದ ಪ್ರೀತಿ ಏಕೆಂದರೆ ಇವನು ಯಾವುದೇ ಕೆಲಸವನ್ನು ಹೇಳಿದರು ಹುಂ ಎಂದು ಮಾಡುತ್ತಿರುತ್ತಾನೆ. ಕುವೆಂಪುರವರು ಈ ವರ್ಗದ ಜನರನ್ನು ಕೆಲವು ಕಾದಂಬರಿಗಳಲ್ಲಿ ಅವರಿಗೆ ತನ್ನದೇ ಆದಂತಹ ಪಾತ್ರಕ್ಕೆ ಜೀವತುಂಬಿದ್ದಾರೆ.

ಮಲೆನಾಡಿನಲ್ಲಿ ಕೆಳವರ್ಗದ ಜನರ ಸ್ಥಿತಿಗಳು ತುಂಬಾ ಕಠಿಣವಾಗಿ ಮೂಡಿಬಂದಿವೆ. ಈ ಕೃತಿಯಲ್ಲಿ ದನ ಕಾಯುವ ಪಾತ್ರವಂತು ತುಂಬಾ ವಿಭಿನ್ನವಾಗಿದೆ. ಹೆಗೆಂದರೆ ಮಳೆಗಾಲದಲ್ಲಿ ಅವರು ಪಡುವಂತಹ ಕಷ್ಟಗಳು ತುಂಬಾ ಹಿಂಸೆಗೆ ಗುರಿಯಾಗಿರುತ್ತಿದ್ದರು. ಹಾಗೂ ಇವರ ಸಾಮಾಜಿಕ ಜೀವನವು ಈ ರೀತಿ ಉದ್ಭವವಾಗಿದೆ. ಅಲ್ಲಿನ ಚಳಿವಾತಾವರಣ, ಸೊಳ್ಳೆ ಕಡಿತ, ಜಿಗಣೆಯ ಕಾಟ, ನೀರಿನಲ್ಲಿ ನಡೆಯುವ ದೃಶ್ಯವಂತೂ ಎದೆ ಜಲ್ಲೆನ್ನುವಂತಹ ಸಾಹಸಗಳನ್ನು ಮೆಟ್ಟನಿಲ್ಲಬೇಕಾಗಿತ್ತು.

ಅದರಂತೆ ಇವರ ಸ್ಥಿತಿಗತಿಗಳು ಓದುಗರ ಮನಸ್ಸಿನ ಮೇಲೆ ಮೂಡುತ್ತ. ಹೇಗೆಂದರೆ ಇವರ ಕೇರಿಯನ್ನು ಹೋಗೇರಿ ಎಂದು ಕರೆಯುತ್ತಿದ್ದರು ಇವರಲ್ಲಿ ಕೆಲವು ರೀತಿಯ ಗುಂಪುಗಳು ಇರುತ್ತಿದ್ದವು. ಅದರಲ್ಲಿ ವಿಭಿನ್ನವಾದ ಕೆಲಸಕಾರ್ಯಗಳನ್ನು ಮಾಡುತ್ತಿರುತ್ತಾರೆ. ಆದರೆ ಇವರಿಗೆ ಕೆಳಭಾಗದ ಜಾಗವನ್ನು ಮಾತ್ರ ಆಕ್ರಮಿಸಿಕೊಂಡು ಜೀವನ ನಡೆಸುತ್ತಿರುತ್ತಾರೆ. ಅದಕ್ಕೆ ದೊಡ್ಡಿ ಎಂಬ ಹೆಸರು ಕೂಡ ಇರುವುದುಂಟು. ಏಕೆ ಈ ಮಾತುಗಳು ತಿಳಿಸುತ್ತಾನೆ ಎಂದರೆ ಇವರ ಕೆಲಸಗಳು ಮೇಲ್ವರ್ಗದ ಜನರಿಗಿಂತ ತೀರ ಕೆಳಮಟ್ಟದಲ್ಲಿ ಇರುತ್ತಿದ್ದವು. ಆದರೂ ಇವರು ಪಾಲಿಗೆ ಬಂದ ಪಂಚಾಮೃತದಂತೆ ಇವರು ಯಾವುದೇ ಕೆಲಸವನ್ನು ಮಾಡಲು ಹಿಂಜರಿಯುತ್ತಿರಲಿಲ್ಲ. ಆದರೆ ಇವರು ಕೆಲವು ವೃತ್ತಿಯಲ್ಲಿ ತೊಡಗುವಾಗ ಒಂದು ಸನ್ನಿವೇಶವನ್ನು ತಿಳಿಸಲು ಇಚ್ಚಿಸುತ್ತಾನೆ. ಇಲ್ಲಿ ಅವರು ಯಾವುದೇ ರೀತಿಯ ಪ್ರತಿಭಟನೆ ಮನೋಭಾವಗಳು ಮನಸ್ಸಿನಲ್ಲಿ ನಿಂತ ನೀರಂತೆ ಇರುತ್ತಿದ್ದವು. ಆದರೆ ಅವುಗಳನ್ನು ಹೊರಗೆಚಾಚಲು ಜಾನುವಾರಗಳಂತೆ ಅಂಬಾ ಎಂದು ತುದಿಗಾಲಿನಲ್ಲಿ ಮಾತುಗಳು ಮಾಯವಾಗುತ್ತಿದ್ದವು. ನಂತರ ಕೆಲವು ರೀತಿಯಲ್ಲಿ ಮೇಲ್ವರ್ಗದ ಜನರು ಇಲ್ಲಿ ಇವರನ್ನು ಒಂದು ವೃತ್ತಾಂತದಲ್ಲ ಕೂಡಿಹಾಕುವ ಕೆಲಸಗಳು ನಡೆಯುತ್ತಿದ್ದವು ಅವರ ಕೆಲಸಕಾರ್ಯಗಳನ್ನು

ಗಮನಿಸುವುದು ಹಾಲೂ ಅವರಿಗೆ ಹೀಗೆ ಮಾಡಬೇಕು ಎಂಬ ಷರತ್ತುಗಳು ಆಗಾಗ ಏರ್ಪಾಡಾಗುವಂತಹ ಸನ್ನಿವೇಶಗಳು ಬರುತ್ತಿದ್ದವು.

ಇವರು ಕೆಳವರ್ಗದ ಜನರನ್ನು ಓದುಗರಲ್ಲಿ ಒಂದು ಉತ್ತಮವಾದ ಸನ್ನಿವೇಶಗಳನ್ನು ಮನಕಲುಕುವಂತೆ ಕುವೆಂಪುರವರು ಚಿತ್ರಿಸಿದ್ದಾರೆ. ಮಂಜಣ್ಣ ಎಂಬುವನು ಕುವೆಂಪುರವರಿಗೆ ಅಂದಿನ ಕಾಲದಲ್ಲಿ ಅಚ್ಚುಮೆಚ್ಚು ಆಗಿದ್ದನು. ಏಕೆಂದರೆ ಇವನು ಕುವೆಂಪುರವರು ಏಳುವಂತೆ ನಾಮಗೆಗುರು ನಮ್ಮ ಇರಿಯರಿಗೆ ಆಳು! ಎಂಬ ಮಾಹಿತಿಯನ್ನು ಪ್ರಸ್ತಾಪಿಸಿದ್ದಾರೆ. ಇಲ್ಲ ಕುವೆಂಪುರವರು ಗುರುವಿನ ಸಮ ಎಂದು ಕೆಳವರ್ಗದವನಾದರು ಅವನಿಗೆ ವಿಶೇಷ ಸ್ಥಾನಮಾನ ಕಟ್ಟಿಸಿದ್ದಾರೆ. ಕುವೆಂಪುರವರು ಹೇಳುವಂತೆ 'ಸರ್ವರಿಗೂ ಸಮಬಾಳು ಸರ್ವರಿಗೂ ಸಮಪಾಲು' ಎಂಬ ವಿಷಯವನ್ನು ಮಲೆನಾಡಿನ ಚಿತ್ರಗಳಲ್ಲಿ ಕೆಳವರ್ಗದ ಪಾತ್ರವನ್ನು ಒಂದು ಉತ್ತಮವಾದ ವಿಚಾರಗಳಿಂದ ಅವರ ಪಾತ್ರಕ್ಕೆ ಜೀವತುಂಬಿದ್ದಾರೆ. ಕುವೆಂಪುರವರಿಗೆ ಕಥೆ ಎಂದರೆ ಇಷ್ಟ. ಅವರಿಗೆ ಕೆಲವು ಗೆಳೆಯರೊಡನೆ ಸೇರಿ ಮಂಜಣ್ಣನ ಜೊತೆ ಕಾಲ ಕಳೆಯುವುದು ಒಂದು ವಿಷಯವಾಗಿರುತ್ತಿತ್ತು. ಇಂತಹ ವಿಚಾರಗಳನ್ನು ಕುವೆಂಪುರವರು ಕೆಲವು ಕೃತಿಗಳಲ್ಲಿ ಕೆಳವರ್ಗದ ಜನರನ್ನು ಚಿತ್ರಿಸಿದ್ದಾರೆ.

## ಮೇಲ್ವರ್ಗದ ಜೀವನ ಚಿತ್ರಣ

ಕುವೆಂಪು ಮಲೆನಾಡಿನ ಚಿತ್ರಗಳಲ್ಲಿ ಮೇಲ್ವರ್ಗದ ಜನರ ಬದುಕು ಚಿತ್ರಣವನ್ನು ಕೆಲವು ರೀತಿಯಲ್ಲಿ ಚಿತ್ರಿಸಿದ್ದಾರೆ. ಈ ಭಾಗದಲ್ಲಿ ಬರುವಂತಹ ತೋಟದಾಚೆಯ ಭೂತ ಇಲ್ಲಿ ಕೆಲವು ಮೇಲ್ವರ್ಗದ ಜನರು ಯಾವ ರೀತಿಯ ಸಂಪ್ರದಾಯವನ್ನು ಒಳಗೊಂಡಿದ್ದರು ಎಂಬುದನ್ನು ಗಮನಿಸಬಹುದು. ಕಾಡಿನಲ್ಲಿರುವಂತಹ ಕಲ್ಲಿಗೆ ಪ್ರತಿ ವರ್ಷ ಜನರು ಅನೇಕ ರೀತಿಯ ಹರಕೆಗಳನ್ನು ಅರ್ಪಿಸುವುದು ತುಂಬಾ ವಿಶೇಷವಾಗಿದೆ ಎಂದು ಹೇಳಬಹದು. ಏಕೆಂದರೆ ಕೆಲವು ಪ್ರಾಣಿ–ಪಕ್ಷಿಗಳನ್ನು ಬಲಿಕೊಡುವುದು ಪ್ರತೀತಿಯಾಗಿರುತ್ತಿತ್ತು. ಇಲ್ಲಿ ಜನರ ಮನಸ್ಸಿನಲ್ಲಿ ತಮ್ಮ ಕಷ್ಟಗಳನ್ನು ಬಗೆಹರಿಸುವುದೆಂಬ ನಂಬಿಕೆ ಇಂತಹ ನಂಬಿಕೆಯೂ ನಂಬುವುದು ಮುಖ್ಯವಾಗಿತ್ತು.

ಇಲ್ಲಿ ಒಂದು ಕುವೆಂಪುರವರು ಗಮನಿಸಿದ ಅಂಶವನ್ನು ತಿಳಿಸುತ್ತಾನೆ. ಸಂಪ್ರದಾಯಗಳು ಜನರನ್ನು ಕಟ್ಟಿಹಾಕಲು ಯಾಶಸ್ವಿಯಾಗುತ್ತದೆ. ಏಕೆಂದರೆ ಇಲ್ಲಿ ನಂಬಿಕೆಯೂ ಉಂಟಾದಾಗ ಜನರು ನಂಬಲೇಬೇಕಾದ ಪರಿಸ್ಥಿತಿಯೂ ಬರಬಹುದು. ಅಂತಹ ವಿಷಯಗಳು ಇಲ್ಲಿ ಜನರ ಬದುಕು ಕೆಲವು ಆಚರಣೆ, ಹರಕೆ, ನಂಬಿಕೆಯನ್ನು ಒಳಗೊಂಡಿರುತ್ತವೆ.

ಮಲೆನಾಡಿನ ಚಿತ್ರಗಳಲ್ಲಿ ಮೇಲ್ವರ್ಗದವರು ಈ ರೀತಿ ಆರಾಧನೆಗೆ ಮಹತ್ವವನ್ನು ಕೊಟ್ಟಿದ್ದರು. ಭೂತಾರಾಯನ ಪ್ರತಿನಿಧಿಯಾದ ಆ ಕಾಡುಕಲ್ಲಿಗೆ ಪ್ರತಿ ವರ್ಷವೂ ಹರಕೆ ಸಲ್ಲುವುದು. ಆಗ ಅನೇಕ ಕುರಿಕೋಳಿಗಳ ಬಲಿಯಾಗುವುದು. ಭೂತಕ್ಕೆ ಬಲಿ ಎಂದರೆ ಬಹಳ ವಿಶ್ವಾಸವಂತೆ. ಊರಿನವರೆಲ್ಲಾ, ಕನ್ನಡ ಜಿಲ್ಲೆಯಿಂದ ಬಂದ ಕೂಲಿಯಾಳುಗಳು ಸೇರ, ಅದಕ್ಕೆ ಪರಮಭಕ್ತರು. ದನಕರುಗಳಿಗೆ ರೋಗಬಂದರೆ ಒಂದು ಕೋಳಿಯನ್ನೋ ಅಥವಾ ಒಂದು ತೆಂಗಿನಕಾಯಿಯನ್ನೋ ಅಥವಾ ಮೂರು ಕಾಸನ್ನೋ ರೋಗಿಯಾದ ಪ್ರಾಣಿಗೆ ಪ್ರದಕ್ಷಿಣೆ ಬರಿಸಿ, ಭೂತರಾಯನಿಗೆ "ಹೇಳಿ ಕೊಂಡು" ಮುಡುಮು ಕಟ್ಟುವರು. ರೋಗಕ್ಕೆ ಅನೇಕ ಔಷಧಗಳನ್ನೂ ಕೊಡುವರು. ಔಷಧದಿಂದ ರೋಗ ಗುಣವಾದರೂ ಕೀರ್ತಿಯೆಲ್ಲಾ ಭೂತರಾಯನಿಗೆ. ಇಂತಹ ಸಂಪ್ರದಾಯಗಳನ್ನು ನೋಡಿದರೆ ಸತ್ಯಸಂಗತಿಗಳು ಹೊರಬೀಳುತ್ತವೆ. ಇಲ್ಲಿ ಭೂತರಾಯನಿಗೆ ಅವಕಾಶ ಮಾಡಿಕೊಟ್ಟಿದ್ದಾರೆ (ಕುವೆಂಪು, ಮಲೆನಾಡಿನ ಚಿತ್ರಗಳು, ಪು. 68)

ಕುವೆಂಪುರವರು ಮಲೆನಾಡಿನಲ್ಲಿ ತಾವು ಅನುಭವಿಸಿದ ಸತ್ಯ ಸಂಗತಿಗಳನ್ನು ಬಿಚ್ಚಿಡುತ್ತಾರೆ. ಇಲ್ಲಿ ಜೇನುಬೇಟೆಗೆ ಹೋಗುವ ಸಂಗತಿ. ಕಷ್ಟ-ಸುಖಗಳನ್ನು ಸಮನಾಗಿ ಹಂಚಿಕೊಂಡಂತೆ ಚಿತ್ರಣವನ್ನು ರಚಿಸುತ್ತಾ ಹೋಗುತ್ತಾರೆ.

ಮಲೆನಾಡಿನ ಚಿತ್ರಗಳಲ್ಲಿ ಮೇಲ್ವರ್ಗದ ಜನರ ಆರಾಧನೆಯು ಒಂದು ರೀತಿ ಇದ್ದರೆ, ಅವರೇ ರಚಿಸಿರುವಂತಹ ಕಾನೂರು ಹೆಗ್ಗಡತಿಯಲ್ಲಿಯೂ ವಿಶಿಷ್ಟವಾಗಿದೆ. ನಿಂಗನ ಪದಾರ್ಥಗಳಲ್ಲಿ ಕಳೆದುಹೋಗಿ ತನ್ನ ಭಾವನೆಗಳನ್ನು ವ್ಯಕ್ತಪಡಿಸುತ್ತಿರುವಾಗ ಅವನಿಗೆ ಹಲವಾರು ಜನರು ಬಂದು ಸಮರ್ಥಪಡಿಸಲು ಮುಂದಾಗುತ್ತಾರೆ. ಆದರೆ ಸೋಮು ಬಂದು ಅವನಿಗೆ ಈ ರೀತಿ ಹೇಳುತ್ತಾನೆ. ಹೌದು ನಿಂಗಯ್ಯ! ನಾ ಹೇಳ್ದಿ! ಕೇಳಿನಿ. ನೀವು ಹಿಂಗೆ ಅರಚುವುದು ಯಾಕೆ? ಹಾಗಂದ್ರೇನು ಸತ್ಯ ಕೆಟ್ಟು ಹೋಯಿತಾ? ನಮ್ಮ ಭೂತರಾಯನಿಗೆ ಒಂದು ತೆಂಗಿನಕಾಯಿ ಹರಸಿ, ಎಲ್ಲರ ಕೈಲೂ ಮುಟ್ಟಿಸಿ, ಆಮೇಲೆ ನೋಡಿ! ನಿಮ್ಮ ಸಾಮಾನು ಎಲ್ಲಿದ್ದರೂ ಹೊರಗೆ ಬಂದು ಬೀಳ್ತುವ!" ಎಂದು ಮಂತ್ರಾಲೋಚನೆ ಹೇಳಿದನು.

ನಿಂಗ ಆ ತೆಂಗಿನಕಾಯಿಯನ್ನು ಸ್ವಚ್ಛ ತೀರ್ಥದಿಂದ ತೊಳೆದು ಹೂವು, ಕೋಳಿ ಮೊಟ್ಟೆಯ ರಕ್ತ ಮೊದಲಾದವುಗಳಿಂದ ಅರ್ಚಿಸಿ, ಅದನ್ನು ಕೈಯಲ್ಲಿ ಹಿಡಿದುಕೊಂಡು ನಾಲ್ಕು ದಿಕ್ಕುಗಳಿಗೂ ತಿರುಗಿ ತಿರುಗಿ ನಮಸ್ಕರಿಸುತ್ತಾ ಮಹಾ ಭಯ ಭಕ್ತಯಿಂದ ಬಂದು ನಿಂತು ರಾಗವಾಗಿ "ಸ್ವಾಮಿ ಭೂತರಾಯ, ಪಾಪ ಪುಣ್ಯ, ಎಲ್ಲಾ ನಿನಗೆ ಗೊತ್ತು. ಈ ಬಡವನ ಮೇಲೆ ಕನಿಕರ ಇಟ್ಟು ನಿನ್ನ ಶಕ್ತಿ ತೊರಿಸಬೇಕು. ಮುಂದಿನ ಹರಕೆಗೆ ಒಂದು ಕೋಳಿ ಹೆಚ್ಚಾಗಿ ಕೊಡ್ತೀನಿ ನಿನಗೆ ...............ಥೂ! ಮಾಂಕಾಳಿ, ಮಾರಿ, ದುರ್ಗಿ, ಅವರ ಕಣ್ಣು ಹೊಟ್ಟೆ ಹೋಗಲಿ! ಅವರ ಬಾಯಿಗೆ ಮಣ್ಣಾಗಲಿ! ಅವರು ರಕ್ತ ಕಾರಿಹಾಳಾಗಿ ಹೋಗಲಿ!" ನಿಂಗ ಈ ರೀತಿ ಮುಡಿಪು ಕಟ್ಟಿದನು. (ಕುವೆಂಪು, ಕಾನೂರು ಹೆಗ್ಗಡತಿ, ಪು. 326)

ಈ ಎರಡು ಕಾದಂಬರಿಗಳನ್ನು ಗಮನಿಸಿದರೆ ಮೇಲ್ವರ್ಗದ ಜನರ ಶ್ರಮವು ಹೇಗಿತ್ತು ಎಂಬುದು ತಿಳಿಯಪಡಿಸಬಹುದು. ಕುವೆಂಪುರವರು ಪ್ರಕೃತಿಯ ಆರಾದನೆಗೆ ವಿಶೇಷಹೊತ್ತನ್ನು ನೀಡಿದ್ದಾರೆ. ಒಬ್ಬೊಬ್ಬರ ಒಂದೊಂದು ರೀತಿಯ ಬದುಕಿನ ಕ್ರಮಗಳನ್ನು ಗಮನಿಸಿದರೆ ಅಂದಿನ ಕಾಲಕ್ಕೆ ವಿಷ್ಣು ಸತ್ಯಾಂಶಗಳಿಂದ ಕೂಡಿದ್ದರು. ಎಂಬ ನಂಬಿಕೆಗಳನ್ನು ತಿಳಿಯಬಹುದು. ಹಾಗೆ ಕೆಲವು ವಿಚಾರಗಳನ್ನು ತಿಳಿಸುವುದರಿಂದ ಬದುಕಿನ ಕ್ರಮಗಳು ಬದಲಾಗುತ್ತಿದ್ದವು.

ಕುವೆಂಪುರವರು ತಮ್ಮ ಕಾಲದ ಶಿಕ್ಷಣವನ್ನು ಸವಿಸ್ತಾರವಾಗಿ ತಿಳಿಸುತ್ತಾರೆ. ಮೊದಲಿಗೆ ಇಂದಿನ ಕಾಲದಲ್ಲಿ ಬರೆಯುವುದಕ್ಕೆ ಸ್ಲೇಟು ಮುಖ್ಯವಾದರೆ ಅಂದಿನ ಕಾಲದಲ್ಲಿ ಮರಳಿನ ಸ್ಲೇಟು! ಏಕೆ ಈ ರೀತಿ ಎಂದರೆ ಕುವೆಂಪು ಹೇಳಿದಂತೆ ಈಗಿನ ಹಾಗೆ ಸ್ಲೇಟು ಕಾಗದ ಮುಂತಾದ ಪರದೇಶದ ವಸ್ತುಗಳ ಮೇಲೆ ಬರೆಯುವ "ಕೆಟ್ಟ ಪಾಳಿ" ಇರಲಿಲ್ಲ. ದೇಶಾಭಿಮಾನ ಉಕ್ಕಿ ಹರಿಯುವಕಾಲ. ಆದ್ದರಿಂದಲೆ ನಾವುಕೂಡ ಸ್ವದೇಶದ ವಸ್ತುಗಳಾದ ಮರಳ ಮೇಲೆ ಅಕ್ಷರಾಭ್ಯಾಸ ಮಾಡಿದೆವು. ಇಲ್ಲಿ ಗಮನಿಸಬೇಕಾದ ಅಂಶಗಳೆಂದರೆ ಕುವೆಂಪುರವರು ಎಷ್ಟು ದೇಶಭಕ್ತರಾಗಿದ್ದರು ಎಂಬುದು ತಿಳಿಯುತ್ತದೆ. ನನಗೆ ಅನಿಸಿದಂತೆ ಯಾಕೆ ಈ ರೀತಿ ಮರಳಿನ ಮೇಲೆ ಬರೆಯುತ್ತಿದ್ದರೆಂದರೆ ಅಕ್ಷರಗಳು ಕ್ರಮಬದ್ಧವಾಗಿ, ಅಂದವಾಗಿ, ಆಕರ್ಷಣೆಯಾಗಿ ಬರುತ್ತಿದ್ದವೆಂದು ನನಗೆ ಅನಿಸುತ್ತದೆ. ಕಾನೂರು ಹೆಗ್ಗಡತಿಯಲ್ಲಿ ಚಂದ್ರಯ್ಯಗೌಡರು ವಿದ್ಯಾಭ್ಯಾಸವನ್ನು ಕುರಿತು ಈ ರೀತಿ ಹೇಳಿದ್ದಾರೆ. ವಿದ್ಯಾಭ್ಯಾಸ ಹುಡುಗರನ್ನು ಹಾಳುಮಾಡುಬಿಡುತ್ತದೆ ಎಂದು! ದೇವರು ದಿಡರು ಭಕ್ತಿ ಗಿಕ್ತಿ ಎಲ್ಲ ನಿರ್ನಾಮ! ಜೊತೆಗೆ ನೂರಾರು ಹವ್ಯಾಸಗಳನ್ನು ಬೇರೆ ಕಲಿತುಬಿಡುತ್ತಾರೆ. ನಿನ್ನ ಮನೆ ಜಮೀನು ಉಳಿಯಬೇಕಾದರೆ ಅವರ ಓದು ನಿಲ್ಲಿಸಿ, ಮದುವೆ ಗಿದುವೆ ಮಾಡಿ ಕೆಲಸಕ್ಕೆ ಹಚ್ಚಿ ಸಂಸಾರ ತಲೆಗೆ ತಾಗಿದರೆ ಆಗ ಬುದ್ಧಿ ಬರುತ್ತದೆ". ಈ ಮಾತುಗಳನ್ನು ಗಮನಿಸಿದರೆ ಚಂದ್ರೇಗೌಡರು ಸಂಪ್ರದಾಯಸ್ಥರೆಂದು ಗೊತ್ತಾಗುತ್ತದೆ. ಏಕೆಂದರೆ ವಿದ್ಯಾಭ್ಯಾಸವು ಜನರನ್ನು ಅಂದಾನುಕರಣೆಯಿಂದಾಗಿಸುತ್ತದೆಯೋ ಹೊರತು ಅನುಕೂಲತೆಯಲ್ಲ. ಅವರಿನ ಮನಸ್ಥಿತಿಯೂ ತೀರ ಹಳ್ಳಿಯ ಸಂಪ್ರದಾಯಗಳಿಗೆ ಮಾರಕಹೋಗಿರಬಹುದು ಇಂತಹ ಮಾತುಗಳನ್ನು ಗಮನಿಸಿದಾಗ ಓದುಗರಲ್ಲಿ ಅವರು ಹೇಳಿದ ಮಾತು ನಿಜವೆ! ಇಲ್ಲಿ ಸುಳ್ಳೆ ಎಂಬುದು ತಿಳಿಯುತ್ತದೆ. ಹೂವಯ್ಯ ಹೆಚ್ಚು ಓದಿಕೊಂಡಿದ್ದರಿಂದ ಸತ್ಯ ಯಾವುದು? ಸುಳ್ಳುಯಾವುದು? ನಂಬಿಕೆ ಯಾವುದು? ಅಪನಂಬಿಕೆಯಾವುದೆಂದು ಅವನಿಗೆ ತಿಳಿಯುತ್ತಿತ್ತು ಆದರೆ ಚಂದ್ರೇಗೌಡರು ತನ್ನ ಮಾತುಗಳಿಂದ ಹೇಳುತ್ತಾರೆ. ಹೂವಯ್ಯ ಅವನ ದೆಸೆಯಿಂದ ರಾಮಯ್ಯ ಇಬ್ಬರೂ ಸೇರಿ ದೆಯ್ಯ ದ್ಯಾವರು ಭೂತ ಗೀತ ಜಿಕಣಿ ಗಿಕಣಿ ಒಂದೂ ಬ್ಯಾಡ ಅಂತ ಬೋದ್ನೋಕೆ ಸುರು ಮಾಡಿದ್ದಾರೆ. ಆ ಹೂವಯ್ಯನಂತೂ ಅದೆಂತೆಂತದೋ – ಬಗವದ್ಗೀತೆಯಂತೆ ಉಪ್ನಿಷತ್ತಂತೆ – ಓದಿ ತಲೆ ಕೆಡಿಸಿಕೊಳ್ಳುತ್ತಿದ್ದಾನೆ... ಮನೆಗೆ ಬಂದವನು ಒಂದು ಹಾಳು ಕಾಳಿನ ಕೆಲಸ ಕೂಡಾ ನೋಡೋದಿಲ್ಲ. ಉಪ್ಪರಿಗೆ ಮೇಲೆ ಓದುತ್ತಾ ಕುಳಿತುಬಿಡ್ತಾನೆ". (ಕುವೆಂಪು, ಕಾನೂರು ಹೆಗ್ಗಡತಿ, ಪು. 67) ಈ ರೀತಿಯ ಮಾತುಗಳನ್ನು ಗಮನಿಸಿದರೆ

ಹೂವಯ್ಯನು ಬದುಕಿನ ವಾಸ್ತವಂಶಗಳನ್ನು ಹುಡುಕುತ್ತಿದ್ದರೆ ಚಂದ್ರೇಗೌಡರು ತಮ್ಮ ಸಂಪಾದಯಗಳನ್ನು ಬಿಟ್ಟುಕೊಡದೆ ಅವರು ಹೇಳುವ ಮಾತುಗಳು ತೀರಭಿನ್ನವಾಗಿದೆ. ಕೆಲವರು ಸಂಪ್ರದಾಯಗಳನ್ನು ಅಪರಿಸಿದರೆ ಸಕೆಲವರು ದಿಕ್ಕರಿಸುತ್ತಾರೆ. ಅವರವರ ಬದುಕಿನ ಕ್ರಮಗಳು, ನೆಲೆಗಳು, ಸಂಪ್ರದಾಯಗಳು ಬದಲಾಗುತ್ತಾಹೋಗುತ್ತವೆ.

# ಅಧ್ಯಾಯ - 3

## ಮಲೆನಾಡಿನ ಭೌಗೋಳಿಕ ಚಿತ್ರಣ

ಬೆಟ್ಟಗುಡ್ಡ - ಬಯಲು ಸೀಮೆಗಳಿಂದ ಆವೃತವಾಗಿರುವ ಪ್ರದೇಶವೆಂದರೆ ಮಲೆನಾಡಿನ ಭೌಗೋಳಿಕ ದೃಶ್ಯವನ್ನು ಸೆರೆಹಿಡಿಯುವಲ್ಲಿ ಕುವೆಂಪು ಯಶಸ್ವಿಯಾಗಿದ್ದಾರೆ. ಎಂದು ಹೇಳಬಹುದು. ಪ್ರಾಣಿ - ಪಕ್ಷಿ - ಪ್ರಕೃತಿ ಅಲ್ಲಿನ ವಾಸ್ತವ ವಾಸ್ತವ ಬದುಕಿನ ರೀತಿನೀತಿಗಳನ್ನು ತಿಳಿಸಲು ಮತ್ತು ಭೌಗೋಳಿಕ ಅಂಶಗಳನ್ನು ತಿಳಿಯಬೇಕು.

ಕುವೆಂಪುರವರು ಮಲೆನಾಡಿಗೆ ಮನಸೋತವರಾಗಿದ್ದಾರೆ ಏಕೆಂದರೆ ಅಲ್ಲಿನ ವಿಚಾರಗಳು ತುಂಬಾ ತೀವ್ರವಾದ ಕುತೂಹಲಕರವಾದ ಸಂಗತಿಗಳಾಗಿವೆ. ಬೆಟ್ಟಬಯಲುಗಳು ತುಂಬಾ ಆಳವಾದ ಪ್ರದೇಶದಿಂದ ಆವೃತವಾಗಿದೆ. ಇಲ್ಲಿ ಕೆಲವು ಪ್ರವಾಸಿಗರಿಗೆ ಕೈಬೀಸಿ ಕರೆಯುವ ಚಿತ್ರಣವೂ ಒಂದಾಗಿದೆ. ಮಲೆನಾಡು ಎಂದ ತಕ್ಷಣ ನೆನಪಾಗುವುದು ದಟ್ಟವಾಗಿ ಬೆಳೆದು ನಿಂತಿರುವ ಸಾಲು ಸಾಲಿನ ಬೆಟ್ಟಗುಟ್ಟಗಳು ಇಲ್ಲಿ ಬದುಕುವ ಜನರಂತೂ ಭೂಮಿಮೇಲಿನ ಸ್ವರ್ಗ ಎಂದು ಹೇಳಬಹುದು ಏಕೆಂದರೆ ತಂಪಾದ ವಾತಾವರಣ ಬಾಗಿ ಬಳಕುವಂತಿರುವ ಮರಗಳನ್ನು ನೋಡುಗರ ಮನಸ್ಸಿಗೆ ಭಯದ ವಾತಾವರಣ ಆವರಿಸುತ್ತದೆ. ಇಲ್ಲಿನ ವಾಸ್ತವಿಕ ಬದುಕು ನಡೆಸಲು ಕೆಲವು ಕಷ್ಟಕರವಾದ ಸಂಗತಿಗಳು ಎದುರಾಗುತ್ತವೆ. ಅಂದರೆ ಅಲ್ಲಿನ ಜನರ ಕೃಷಿ ಚಟುವಟಿಕೆಗಳನ್ನು ಕೈಗೊಳ್ಳಲು ಸ್ವಲ್ಪ ಕಷ್ಟವಿಚಾರವಾಗುತ್ತದೆ. ಯಾಕೆಂದರೆ ಶೀವನ ಜಡೆಯಕಾರದ ಇಳಿದು ಹೋಗಿರುವ ಬೆಟ್ಟ-ಬಯಲುಗಳು ರೂಪುಗೊಂಡಿವೆ. ಮಳೆಗಾಲದಲ್ಲಿ ಮಲೆನಾಡಿನ ಚಿತ್ರಣವೆ ಉದ್ದೇಶವೂ ತುಂಬಾ ವಿಶೇಷತೆಯಾಗಿದೆ. ಯಾಕೆಂದರೆ ದುಡಿಮೆಗೆ ಮಲೆನಾಡು ಅಷ್ಟು ಯೋಗ್ಯವಾದ ಪ್ರದೇಶವಲ್ಲ ಆದರೂ ಅಲ್ಲಿನ ಜನಗಳ ಭೌಗೋಳಿಕ ಅಂಶಗಳಿಗೆ ಹೊಂದುಕೊಂಡು ಹೋಗುವುದು ವಿಶೇಷವಾಗಿದೆ. ಮರಗಳಂತೂ ರಸ್ತೆಯ ಬದಿಯಲ್ಲಿ ಸಾಲುಸಾಲಾಗಿ ಇರುವೆ ಸಾಲಿನಂತೆ ನಿಂತಿವೆ. ಹೆಚ್ಚಾಗಿ ಬಯಲಿನ ಪ್ರಮಾಣ ಕಡಿಮೆ ಎಂದು ಹೇಳಬಹುದು ಏಕೆಂದರೆ ಮರಗಳು ಆವೃತ್ತವಾಗಿರುವುದರಿಂದ ಭೂಮಿಗೆ ಸೂರ್ಯನ ಕಿರಣಗಳು ಜಾರಿಬೀಳುವುದು ನಿಧಾನವಾಗಿಯೇ ಆದರೂ ಮಲೆನಾಡಿನಂತಹ ಪ್ರದೇಶವೂ ಪ್ರಾಣಿ-ಪಕ್ಷಿಗಳಿಗೆ ವಿಶೇಷ ಸ್ಥಾನ - ಮಾನವನ್ನು ನಿಡಿದ್ದಾರೆ ಯಾಕೆಂದರೆ ಅಲ್ಲಿನ ಭೌಗೋಳಿಕವಾಗಿ ಪ್ರಾಣಿ-ಪಕ್ಷಿಗಳೂ ವಲಸೆ ಬರುವುದು ಕುತೂಹಲಕರವಾದ ಸಂಗತಿಯಾಗಿದೆ. ಮತ್ತೊಂದು

ವಿಷಯವೆಂದರೆ ಹರಿಯುವಂತ ನದಿಗಳು ಸಾಮಾನ್ಯವಾಗಿ ಹರಿಯುವ ಸೊಗಸನ್ನು ಮಲೆನಾಡಿನಲ್ಲಿ ಕಾಣಬಹುದು. ಮಲೆನಾಡಿನಲ್ಲಿ ಮತ್ತೊಂದು ವಿಶೇಷವೆಂದರೆ ಬೆಟ್ಟ–ಬಯಲುಗಳು ಇಲ್ಲಿನ ಮಲೆನಾಡು ಎಂಬ ಪ್ರಸಿದ್ಧಿಗೆ ಕಾರಣವಾಗಿವೆ. ಯಾವ ಕಡೆ ತಿರುಗಿ ನೋಡಿದರು ಬೆಟ್ಟಗಳು, ಹಸಿರಾಗಿ ನಿಂತ ಮರಗಳು. ಇಂತಹ ಚಿತ್ರಣಗಳು ನಗರದ ಭಾಗದಲ್ಲಿನ ಜನರನ್ನು ಭೌಗೋಳಿಕ ಅಂಶಗಳನ್ನು ಹಿಡಿದಿಟ್ಟುಕೊಳ್ಳಲು ಹತ್ತಿರವಾಗುತ್ತದೆ. ಏಕೆಂದರೆ ನಗರಭಾಗದ ಜನಗಳಂತೂ ಸಾಮಾನ್ಯವಾಗಿ ಪ್ರವಾಸ ಕೈಗೊಳ್ಳುವುದು ತಮ್ಮ ತಮ್ಮ ಮನಸ್ಸಿನ ಮೇಲೆ ಬೀರುವಂತಹ ಚಿತ್ರಣವಾಗಿದೆ. ಮಲೆನಾಡಿನ ಪ್ರದೇಶದಲ್ಲಿ ಅಗತ್ಯಗನುಗುಣವಾಗಿ ಬಂದು ಹೋಗುವಂತಹ ಜನರೇ ಹೆಚ್ಚು ಕೆಲವು ಭೌಗೋಳಿಕ ಗುಣಗಳಿಗೆ ಹೊಂದುಕೊಳ್ಳುವುದು ಕಷ್ಟಕರವಾಗುತ್ತದೆ. ಕುವೆಂಪುರವರು ತಮ್ಮ ಅನಿಸಿಕೆಯನ್ನು ಕೆಲವು ಸಂದರ್ಭದಲ್ಲಿ ಹಂಚಿಕೊಳ್ಳಲು ಭೌಗೋಳಿಕ ಹಿನ್ನೆಲೆಯಲ್ಲಿ ಮುಖ್ಯವಾಗಿದೆ. ಏಕೆಂದರೆ ಅವರು ಮನುಷ್ಯ ನಿರ್ಮಿತ ದೇವಾಲಯಗಳಿಗೆ ಹೋಗಬೇಕಿಲ್ಲ ನನ್ನ ಜೀವನದಲ್ಲಿ ಕಲ್ಪನೆ ಸ್ಮತಿಗಳ ಕೃಪೆಯಿಂದ ಸುಖಶಾಂತಿ ಪೂರ್ಣವಾಗಿದೆ ಎಂದು ಹೇಳುತ್ತಾರೆ. ಏಕೆಂದರೆ ಇಲ್ಲಿ ಯಾವುದೇ ರೀತಿ ಮೂರ್ತನೆಲೆಗಳಿಗೆ ಪ್ರಾಮುಖ್ಯತೆ ವಹಿಸಿದ್ದವರಲ್ಲಿ ಅಮೂರ್ತದೆಡೆಗೆ ಒಲವೂ ಮೂಡಿಸಿದ್ದವರು ಇಂತಹ ಭೌಗೋಳಿಕ ಚಿತ್ರಣವನ್ನು ಮೆಲುಕು ಹಾಕುವಲ್ಲಿ ಕುವೆಂಪು ಯಶಸ್ವಿಯಾಗಿದ್ದಾರೆ ಎಂದು ಹೇಳಬಹುದು.

ಕುವೆಂಪು ರವರು ತಮಗಾದಂತಹ ವಿಚಾರಗಳನ್ನು ವ್ಯಕ್ತಪಡಿಸುತ್ತಾ ಹೋಗುತ್ತಾರೆ. ಅವರು ಮೈಸೂರಿನಲ್ಲಿದ್ದಾಗ ಅನುಭವಗಳನ್ನು ಬರೆಯುತ್ತಾರೆ ನವಿಲು ಕಲ್ಲಿನಲ್ಲಿ ಪ್ರತಿ ಸಾಯಂಕಾಲ ಕುಳಿತು ಧ್ಯಾನಮಾಡುತ್ತಿದ್ದರು. ಆಗ ಪರ್ವತ ಶ್ರೇಣಿಗಳು, ಆ ವಿಶಾಲ ನೀಲಗಗನ, ಆ ಅಪಾರ ಅರಣ್ಯರಾಶಿ, ಆಸಹಸ್ರ ವ್ಯಕ್ತಿಗಳ ವಸಂತಗಾನ, ಆ ಹಸುರಿನ ಹೆಮ್ಮೆ, ಆ ಗಂಭೀರ ಮೌನ ಆ ದಿನಾಂತ ಸಮಯದ ಪವಿತ್ರ ಶಾಂತಿ ಸಂಧ್ಯಾಕಾಶದಲ್ಲಿ ಜರಗುವ ಆ ಬಣ್ಣಗಳು ಮೆರವಣಿಗೆ, ಆ ಮುಗಿಲುಗಳು ವಿವಿಧ ವೈಚಿತ್ರ್ಯಮಯ ವರ್ಣಮಯ ವಿನ್ಯಾಸ, ಭೂಮ್ಯಾಕಾಶಗಳ ಮಧ್ಯೆ. ಆ ದೂರದ ದಿಗಂತ ಪಂಕ್ತಿಯ ಮಾಯಾ ರೇಖೆ, ಮೈಲು ತುತ್ತಿನ ಮರಳಿನ ರಾಶಿಗಳಂತೆ ತೋರುವ ಆ ಸುಂದರ ಗಿರಿಶಿಖರಗಳ ತರಂಗಗಳ ನೀಲಲೀಲೆ" (ಕುವೆಂಪು, ಸಮಗ್ರ ಗದ್ಯ, ಪು. 675) ನೆನೆಸಿಕೊಂಡರೆ ಆ ಮನವು ಭಾವಾವೇಗದಿಂದ ಮರೆಯುತ್ತದೆ. ಈ ಸಾಲುಗಳಲ್ಲಿ ನಾವು ಗಮನಿಸಿಬೇಕಾದ ಸಂಗತಿಗಳು ತುಂಬಾ ಕುತೂಹಲಕರವಾದ ವಿಷಯಗಳು ಮೂಡುತ್ತವೆ. ಎಂದೂ

ತಿಳಿಯಬೇಕಾಗುತ್ತದೆ. ಏಕೆಂದರೆ ಕವಿಯು ತನ್ನ ಬರವಣಿಗೆಯನ್ನು ಕೆಲವು ರೀತಿಯಾಗಲಿ ಬರೆಯಲು ಭೌಗೋಳಿಕ ಹಿನ್ನೆಲೆಯೂ ಒಂದು ಮುಖ್ಯ ಕಾರಣ ಎನ್ನಬಹುದಾಗಿದೆ. ಏಕೆಂದರೆ ಇಲ್ಲಿ ಬಳಸಿರುವಂತಹ ವಿಚಾರಗಳು ಭೌಗೋಳಿಕ ಹಿನ್ನೆಲೆಯೂ ಸಾಕ್ಷಿಯಾಗುತ್ತದೆ. ಇಲ್ಲಿ ಕವಿಯೂ ಮಲೆನಾಡಿನ ಚಿತ್ರಣವನ್ನು ತಮ್ಮ ಕೃತಿಗಳಲ್ಲಿ ಬರೆಯುತ್ತಾ ಹೋಗುತ್ತಾರೆ.

ಒಬ್ಬ ವ್ಯಕ್ತಿಯೂ ಒಂದು ನೆಲೆಯನ್ನು ರೂಪಿಸಿಕೊಳ್ಳಬೇಕಾದರೆ ಅವನಿಗೆ ತನ್ನ ನೆರೆಯವರ ಪ್ರಾಮುಖ್ಯತೆ ಮುಖ್ಯ ಎನಿಸುತ್ತದೆ. ಅದೇ ರೀತಿಯಲ್ಲಿ ಕುವೆಂಪುರವರು ತಮ್ಮ ಉತ್ತುಂಗದ ಶೀಖರವನ್ನೇರಲು ಭೌಗೋಳಿಕ ಹಿನ್ನೆಲಯ ಪಾತ್ರವು ಮುಖ್ಯವಾಗುತ್ತದೆ. ಎಂಬ ಅನಿಸಿಕೆ ನನ್ನದಾಗುತ್ತದೆ. ಭೌಗೋಳಿಕ ಚಿತ್ರಣವೂ ಕವಿಯ ಮೇಲೆ ಬೀರುವಂತಹ ಪ್ರಭಾವಗಳು ಎಷ್ಟರಮಟ್ಟಿಗೆ ಮುಖ್ಯವಾಗಿದೆ ಎಂಬುದನ್ನು ಚರ್ಚಿಸಬೇಕಿದೆ. ಏಕೆಂದರೆ ಮಲೆನಾಡಿನಲ್ಲಿ ವಾತಾವರಣದ ಚಿತ್ರಣವೂ ಯಾವ ಸಮುದಾಯದಲ್ಲಿ ಬೇಕಾದರೂ ಬದಲಾಗಬಹುದು. ಸಾಯಂಕಾಲ ಹಾಗೂ ಬೆಳಗ್ಗೆ ಎಂಬುದರ ಬಗ್ಗೆ ಸ್ವಲ್ಪ ತಳಮಳವಾಗುತ್ತದೆ. ಇಂತಹ ಚಿತ್ರಣವೂ ಕವಿಯ ಮೇಲೆ ಬೀರಿದಂತಹ ಪರಿಣಮವು ಒಂದು ವಸ್ತು, ವಿಷಯದ ಮೇಲೆ ರೂಪುಗೊಳ್ಳುತ್ತದೆ.

# ಅಧ್ಯಾಯ – 4

## ಕುವೆಂಪುರವರ ವ್ಯಕ್ತಿತ್ವದ ಮೇಲೆ ಮಲೆನಾಡಿನ ಪ್ರಭಾವ

ಕುವೆಂಪುರವರು ತಮ್ಮ ಕೃತಿಯಲ್ಲಿ ಮಲೆನಾಡಿನ ಬಗ್ಗೆ ಎಷ್ಟೊಂದು ರೀತಿಯ ವಿಷಯಗಳನ್ನು ಪ್ರಸ್ತಾಪಿಸಿದ್ದಾರೆ. ಆದರೆ ಅವರ ಮೇಲೆ ಮಲೆನಾಡಿನ ಪ್ರಭಾವವು ಯಾವ ರೀತಿ ಬೀರಿತ್ತು. ಎಂಬುದು ನಮ್ಮ ನಿಮ್ಮೆಲ್ಲರ ಒಂದು ವಿಷಯಗಳು ಚರ್ಚೆಗೆ ಅವಕಾಶ ಮಾಡಿಕೊಡುತ್ತವೆ. ಏಕೆಂದರೆ ಅವರು ತಮ್ಮ ಬಾಲ್ಯ ಜೀವನದಿಂದ ಉಂಟಾದ ಪ್ರಸಂಗಗಳನ್ನು ಮಲೆನಾಡು ಯಾವ ರೀತಿ ಉತ್ತುಂಗಶಿಖರಕ್ಕೆ ಏರಿಸಿತ್ತು ಎಂಬ ಅಂಶಗಳು ಹತ್ತಿರವಾಗುತ್ತವೆ. ಯಾಕೆಂದರೆ ಅಲ್ಲಿನ ಬೆಟ್ಟಗುಡ್ಡಗಳು ಆವೃತವಾಗಿರುವ ಪ್ರದೇಶವಾಗಿದ್ದರಿಂದ ಅಲ್ಲಿ ಸುತ್ತ ಮುತ್ತ ಇರುವಂತಹ ವಾತಾವರಣವು ಅವರ ಮೇಲೆ ಬೀರಿದಂತಹ ಪ್ರಮುಖ ವಿಚಾರವಾಗಿವೆ. ಏಕೆಂದರೆ ಇಲ್ಲಿ ಮುಖ್ಯವಾದ ವಿಷಯವೆಂದರೆ ನಿಸರ್ಗದ ಒಲವು ಅವರನ್ನು ಹೆಚ್ಚಾಗಿ ಆವರಿಸಿಕೊಂಡಿತ್ತು. ಇಲ್ಲಿ ನಡೆಯುವಂತಹ ಪ್ರಮುಖ ವಿಷಯಗಳು ತುಂಬಾ ಗಾಡವಾದ ಪರಿಣಾಮ ಬೀರುತ್ತಿದ್ದವು. ಹೇಗೆಂದರೆ ಕೆಲವು ಸಾಲುಗಳು ಈ ರೀತಿ ಇವೆ.

"ಹೋಗುವೆನು ನಾ ಹೋಗುವೆನು ನಾ, ನನ್ನ ಒಲುಮೆಯ ಗೂಡಿಗೆ;

ಮಲೆಯ ನಾಡಿಗೆ, ಮಳೆಯ ಬೀಡಿಗೆ ಸಿರಿಯ ರೂಢಿಗೆ ಬೇಸರಾಗಿದೆ ಬಯಲು,

ಹೋಗುವೆ ಮಲೆಯ ಕಣಿವೆಯ ಕಾಡಿಗೆ;

ಹಸುರು ನಾಡಿಗೆ, ಮಳೆಯ ಬೀಡಿಗೆ ಸಿರಿಯ ರೂಢಿಗೆ ಬೇಸರಾಗಿದೆ ಬಯಲು, ಹೋಗುವೆ ಮಲೆಯ ಕಣಿವೆಯ ಕಾಡಿಗೆ;

ಹಸುರು ಸೊಂಪಿನ ಬಿಸಿಲು ತಂಪಿನ ಗಾನದಿಂದಿನ ಕೇಡಿಗೆ; ಆಧುನಿಕ ಕವಿ ಹೀಗೆ ಹಾಡಿದರೆ, ಸಾವಿರ ವರ್ಷಗಳ ಹಿಂದೆ ಕನ್ನಡದ ಆದಿಕವಿ ಪಂಪ ಇಂದಿನ ಇದೆ ಮಲೆನಾಡಿನ ಅಂದಿನೊಂದು ಹಿರಿಯ ಸಿರಿವೀಡಾಗಿದ್ದ ಬನವಾಸಿಯಲ್ಲಿ ತನ್ನ ಬಾಲ್ಯ ಕಾಮಾರಗಳನ್ನು ಬಹುಶಃ ಯೌವನ ಪ್ರಾರಂಭವನ್ನು ಕಳೆದು ಧರ್ಮ ಕರ್ಮ ಸಂಯೋಗದಿಂದ ತವರುಗೆ ದೂರವಾಗಿ ಪುಲಿಗೆರೆಗೆ ಬಂದು, ಅಲ್ಲಿ ಅರಿಕೇಸರಿಯ ಆಸ್ಥಾನದಲ್ಲಿ ಕವಿಯ ಆಗಿ ನೆಲೆಸಿದ ಮೇಲೆ ಮಲೆನಾಡನ್ನು ನೆನಸಿದದು

ಊರಹವ್ಯಾಕುಂತಂತೆಯೆಂದೆಂಬಂತೆ ತನ್ನ ಲೌಕಿಕ ಕಾವ್ಯ ವಿಕ್ರಮಾರ್ಜುನದಲ್ಲಿಯ ಬನವಾಸಿಯ ವರ್ಣನೆಯಲ್ಲಿ ತನ್ನ ಹೃದಯದ ರಸಕೃತಜ್ಞತೆಯನ್ನು ಕೊರೆದಿದ್ದಾರೆ.

ಹೊರಗಣ ಪ್ರಕೃತಿ ಸೌಂದರ್ಯಕ್ಕೆ ಮಾತ್ರವಲ್ಲ ಅಂತರದ ಸಂಸ್ಕೃತಿಗೆ ನಾನು ಬೀಡಾಗಿತ್ತಂತೆ. ತ್ಯಾಗಕ್ಕೆ ಭೋಗಕ್ಕೆ ವಿದ್ಯೆರಗೆ ಸಂಗೀತಕ್ಕೆ ಸುಖಃಗೋಷ್ಟಿಗೆ ಆಗರವಾಗಿತ್ತಂತೆ ಆ ನಾಡು ಅದನ್ನು ನೆನದು ಕವಿಯ ಜೀವ ಮರಳಿ ಅಲ್ಲಿಗೆ ಹೋಗಲು ಹಾತೊರೆಯುತ್ತದೆ. ಆದರೆ ಬಹುಶಃ ರಾಜ ಕಾರ್ಯ ಕರ್ತವ್ಯ ಭಾರಗಳಿಂದ ಬಂಧಿತನಾದ ಅವನಿಗೆ ಈಗಿನ ಸಂವಾದ ಮತ್ತು ಸಂಪರ್ಕದ ಸೌಲಭ್ಯಗಳಿಲ್ಲದ ಆಗಿನ ಕಾಲದಲ್ಲಿ ಅದು ಸಾಧ್ಯವಾಗುವ ಸಂಭವವೋ ತೋರಲಿಲ್ಲವೆಂದು ಕಾಣುತ್ತದೆ. ಆದ್ದರಿಂದ ಈ ಜನ್ಮದಲ್ಲಿ ಅಲ್ಲದಿದ್ದರೆ ಇನ್ನೊಂದು ಜನ್ಮದಲ್ಲಿ, ಮನುಷ್ಯ ಜನ್ಮ ಸಾಧ್ಯವಿಲ್ಲದಿದ್ದರೆ ಕೋಗಿಲೆಯ, ಜನ್ಮವೂ ಮರಿದುಂಬಿಯ ಜನ್ಮವೋ ಪ್ರಾಣಿಜನ್ಮವೋ ಚಿಂತೆಯಿಲ್ಲ. ಅಂತೂ ಮಲೆನಾಡಿನಲ್ಲಿ ಹುಟ್ಟಬೇಕೆಂದು ಹಾರೈಸಿದ್ದಾನೆ" (ಮಲೆನಾಡಿನ ನಿಸರ್ಗ ವಿಭೂತಿ, ಪು. 292–294)

ಕುವೆಂಪುರವರು ಇಂತಹ ವಿಚಾರಗಳನ್ನು ಹೆಚ್ಚಾಗಿ ತಮ್ಮ ಕೃತಿಯಾದ ಮಲೆನಾಡಿನ ಚಿತ್ರಗಳಲ್ಲಿ ಕೆಲವು ರೀತಿಯ ವಿಷಯಗಳು ಪ್ರಭಾವಬೀರುತ್ತವೆ. ಇಲ್ಲಿ ನಡೆಯುವಂತಹ ವರ್ಗ ಹಾಗೂ ಸ್ಥಿತಿಗತಿಗಳು ಒಳಗೊಳ್ಳುತ್ತವೆ. ಏಕೆಂದರೆ ಇಲ್ಲಿ ಪ್ರಕೃತಿಯೂ ಇಲ್ಲಿ ಅವರನ್ನು ಆವರಿಸಿಕೊಂಡಿದೆ. ಹಾಗೂ ಅಲ್ಲಿನ ಜನರ ಸ್ಥಿತಿಗತಿಗಳು ಸಹ ಒಳಗೊಳ್ಳುತ್ತವೆ. ಏಕೆಂದರೆ ಮಲೆನಾಡು ಯಾವಾಗಲೂ ಬೆಟ್ಟಬಯಲುಗಳಿಂದ ಕೂಡಿದ ಪ್ರದೇಶ ಇಲ್ಲಿ ಕೆಲವು ರೀತಿಯ ಸಂಪರ್ಕಗಳು ಅಷ್ಟೇ ಕಷ್ಟ. ಆದರೆ ಕವಿಯ ಮನಸ್ಸಿನಲ್ಲಿ ಬಂದಂತಹ ಪರಿಣಾಮವೆಂದರೆ ಸಾಮಾನ್ಯವರ್ಗದ ವಿಚಾರಗಳು ಇಲ್ಲಿ ನಡೆಯುವ ಸಂಪ್ರದಾಯ, ಆಚರಣೆ, ಬೇಟೆ ಕೂಲಿವರ್ಗದವರು, ಸ್ಥಿತಿಗತಿಗಳು ಪರಿಣಮ ಆವರಿಸಿಕೊಂಡಿದ್ದವು. ಇಂತಹ ವಿಚಾರಗಳು ಕೆಲವು ರೀತಿಯಲ್ಲಿ ಕುವೆಂಪುರ ಮನಸ್ಸಿನ ಮೇಲೆ ಬೀರಿದ ಪ್ರಭಾವವೂ ಹೆಚ್ಚಾಗಿಯೇ ಇತ್ತು. ಆದರೆ ಕೆಲವು ಮನುಷ್ಯನ ಮೇಲೆ ಯಾವುದೇ ಒಂದು ಅಂಶ ಹೆಚ್ಚಾಗಿ ಪರಿಣಾಮ ಬೀರಿದ್ದರೆ ಅದನ್ನು ವಿವರಿಸಲು ಸಾದ್ಯವಾಗುತ್ತದೆ. ಆದರೆ ಕುವೆಂಪುರವರಿಗೆ ಮಲೆನಾಡು ಒಂದು ಹೃದಯ ಭಾಗವಾಗಿ ಅವರನ್ನು ಆವರಿಸಿದ್ದರಿಂದ ಹೆಚ್ಚಾಗಿ ಮಲೆನಾಡನ್ನು ಒಲುವ ತೋರಿಸುವಲ್ಲಿ ಮುಂದಾಗಿದ್ದಾರೆ.

ಮಲೆನಾಡಿನ ಸೌಂದರ್ಯವನೆ, ಸಾವಿರವರ್ಷದ ಹಿಂದೆ ಇದ್ದಂತೆಯೇ ಇವೆ. ಅದರ ಸೌಭಾಗ್ಯಕ್ಕೆ ಮಾತ್ರ ಇಳಿಗಾಲ ಬಂದಂತಿದೆ. ಪ್ರಕೃತಿಯ ಸೌಂದರ್ಯ ಮನುಷ್ಯಪ್ರಜ್ಞೆಯ ರಸಸ್ವಾದನೆಗೆ ವಿಷಯವಾದಂದು, ನೈಸರ್ಗಿಕವಾದ ಸಂಪತ್ತು ಮನುಷ್ಯ ಕೃತಿಯ ಅಭ್ಯುದಯಕ್ಕೆ ಅಧೀನವಾಧವೆಂದು, ಅಂತಹ ಅಭ್ಯದಯವು ಸಂಸ್ಕೃತಿಗೂ ನಿಃಶ್ರೇಯಸಕ್ಕೂ ಕೈಂಕರ್ಯವೆಸಗಿದಂದುಸಿದು ಸೌಭಾಗ್ಯವಾಗುತ್ತದೆ. ಅಂತಹ ಸೌಭಾಗ್ಯದ ಪರಿವರ್ತನೆಗೆ ತಪಸ್ಸು ಮಾಡುತ್ತಿರುವಂತಿದೆ. ಮಲೆನಾಡಿನ ಸೌಂದರ್ಯ! ಗಗನ ಚುಂಬಿಗಳಿಮದ ಬೆಟ್ಟ ಗುಡ್ಡ ಶತಮಾನಗಳಿಂದಲಲು ಮರದ ಬುಡದೆಡೆ ಬಿಸಿಲನ್ನು ಕಾಣದ ಬೆಳೆದು ನಿಂತಿರುವ ದಟ್ಟಕಾಡು! ಎತ್ತರವಾದ ಗದ್ದೆಯ ಕೂಗು! ಎತ್ತರವಾದ ತೋಟಗಳು, ತರತರದ ಹಕ್ಕಿಗಳು, ಸವಿಸ್ತಾರದ ಅರಣ್ಯ ಜಂತುಗಳು ಹುವ್ವು, ಹಣ್ಣು, ಜೇನು, ಗಂಧ, ಗಡ್ಡೆ, ಗೆಣಸು ಮೂಲಕ, ಕಬ್ಬು, ಕಾಪಿ, ಏಲಕ್ಕಿ ಮುಂತಾದ ಅಂಶಗಳು ಮಲೆನಾಡಿನಲ್ಲಿವೆ. ಇಂತಹ ವಿಚಾರಗಳನ್ನು ಕವಿಯೂ ಕೆಲವರಿಗೆ ಇವುಗಳ ಮಹತ್ವವನ್ನು ಯಾವ ರೀತಿ ಸೂಕ್ತ ಎಂಬುದನ್ನು ಹೇಳುತ್ತಾ ಹೋಗುತ್ತಾರೆ. ಆದರೆ ಇಲ್ಲಿನ ಸ್ಥಿತಿಯೂ ತೀರ ಸಂಪ್ರದಾಯದಂತೆ ಒಳಗೊಂಡಿದೆ. ಏಕೆಂದರೆ ಕುವೆಂಪುರವರಿಗೆ ಮನೆಯ ಶಾಲೆಯ ಐಗಳ ಪಾತ್ರ ಮುಖ್ಯವಾಗಿರುತ್ತಿತ್ತು. ಚಿಕ್ಕಂದಿನಿಂದ ಅವರಿಗೆ ಮೊದಲು ಹೆಜ್ಜೆಯನ್ನು ಸಾಃಇತ್ಯದೆಡೆಗೆ ರೂಪಿಸುವಲ್ಲಿ ಇವರ ಪಾತ್ರ ಪ್ರಮುಖವಾಗಿದೆ. ಏಕೆಂದರೆ ಇಲ್ಲಿನ ಸ್ಥಿತುಯು ತುಂಬಾ ವ್ಯವಸ್ಥಿತ ಬದ್ಧವಾಗಿರುತ್ತಿತ್ತು. ಬರೆಯಲು ಕೆಲವು ರೀತಿಯ ಸಂಪ್ರದಾಯಕತೆಯನ್ನು ಐಗಳು ರೂಪಿಸಿಬಿಟ್ಟಿದ್ದರು. ಇಂತಹ ವಿಚಾರಗಳು ಸಹ ಕುವೆಂಪುರವರ ಮೇಲೆ ಪರಿಣಾಮ ಬೀರಿದ್ದವೆಂಬ ನನ್ನ ಭಾವನೆ... (ಸಮಗ್ರಗದ್ಯ ಸಂಪುಟ – 1, ಪು. 296)

ಕುವೆಂಪುರವರಲ್ಲಿ ಕಂಡಂತಹ ವ್ಯಕ್ತಿತ್ವ ತುಂಬಾ ಕ್ರಿಯಾಶೀಲವಾಗಿದೆ. ಯಾಕೆಂದರೆ ಅವರಲ್ಲಿನ ಶ್ರದ್ಧೆ, ಭಕ್ತಿ, ವಿನಯತೆ, ಶ್ರೇಯಸ್ಸು, ಮುಂತಾದ ಗುಣಗಳನ್ನು ಒಳಗೊಂಡಿದ್ದವು. ನಮ್ಮ ಯಾರೊಬ್ಬರಲ್ಲಿರುವುದೂ ಒಂದೇ ವ್ಯಕ್ತಿತ್ವದಲ್ಲಿ. ಮನುಷ್ಯ ಎಂದರೆ ಅನೇಕ ವ್ಯಕ್ತಿತ್ವ ಗುಣವನ್ನು ಚಿತ್ರಿಸುವಲ್ಲಿ ಅವರು ಪ್ರಮುಖ ಪಾತ್ರವೆನಿಸಿದ್ದಾರೆ.

ಇಂತಹ ಗುಣಗಳನ್ನು ಪಡೆಯುವಲ್ಲಿ ಕವಿಗೆ ಸಂಪೂರ್ಣ ಅರ್ಹತೆಯುಳ್ಳವರಾಗಿದ್ದಾರೆ. ಏಕೆಂದರೆ ಮಲೆನಾಡು ಅಷ್ಟೊಂದು ತಂಪಾದ ವಾತಾವರಣವಿರುವ ಪ್ರದೇಶ ಎಲ್ಲರನ್ನು ಕೈಬೀಸಿ ಕರೆದು ಆಕರ್ಷಿಸುವಲ್ಲಿ ಮುಖ್ಯವಾಗುತ್ತದೆ. ಇಲ್ಲಿ ತಮ್ಮ ಅಂದಿನ ಕಾಲದಲ್ಲಿ ಬಳಕೆಯಾಗುತ್ತದೆ. ಇಲ್ಲಿ ತಮ್ಮ ಅಂದಿನ ಕಾಲದಲ್ಲಿ ಬಳಕೆಯಾದಂತಹ ಸಂಪ್ರದಾಯ, ಆಚರಣೆ, ನಂಬಿಕೆ ವಿಚಾರಗಳು ಸ್ಪೂರ್ತಿಯಾಗಿದ್ದವು ಎಂದು ಹೇಳಬಹುದು.

ಇಲ್ಲಿನ ಇಂತಹ ಗುಣಗಳನ್ನು ಅಳವಡಿಸಿಕೊಂಡಿದ್ದರಿಂದ ಮಲೆನಾಡಿನ ಪ್ರಭಾವವು ಅತಿ ಹೆಚ್ಚಾಗಿ ಬೀರಿದೆ ಎಂದು ಹೇಳಬಹುದು. ಕುವೆಂಪುರವರಿಗೆ ಆದರ್ಶಗಳನ್ನು ಆವರಿಸಲು ಕೆಲವರ ವೇದವಾಕ್ಯಗಳೇ ಮುಖ್ಯವಾದವು. ಅದರಲ್ಲಿ ಸ್ವಾಮಿವಿವೇಕಾನಂದರ ಮಿಂಚಿನ ವಾಣಿಯ ಸ್ಪೂರ್ತಿಯ ಮಾತುಗಳು ದೊರೆತವು. ಇದರ ಇಂದಿನ ಉದ್ದೇಶ ಭಾರತದಲ್ಲಿ ಹರಡಿದಂತಂಹ ಬಡತನ, ಹಸಿವುಗಳನ್ನು ನೋಡಿ ವಿವೇಕಾನಂದರು ಕಣ್ಣೀರು ಹರಿಸಿದ ನೆನಮುಗಳು ಇವರಿಗೆ ಆದರ್ಶಗುಣಗಳನ್ನು ರೂಪಿಸಿಕೊಳ್ಳುವಲ್ಲಿ ಮುಖ್ಯವೆನಿಸುವಂತಾಗಿದೆ. ಇದಲ್ಲದೆ ಅತಿ ಮುಖ್ಯವಾಗಿ ಒಂದು ಜನಾಂಗವನ್ನು ರೂಪಿಸುವ, ಮೂಢನಂಬಿಕೆಗಳಿಂದ ಬೇರ್ಪಡಿಸುವ ವಿಜ್ಞಾನ ಮತ್ತು ವೈಚಾರಿಕ ಮನೋಭಾವವನ್ನು ಬೆಳೆಸುವ ಜವಾಬ್ದಾರಿ ಅವರಿಗೆ ಕೂಡಿಬಂದಿತು. ಎಂದು ಹೇಳಬಹುದು. ಏಕೆಂದರೆ ಇಲ್ಲಿನ ಜನರು ಹೆಚ್ಚಾಗಿ ಮೂಢನಂಬಿಕೆಯುಳ್ಳವರು ಭೂತದ ಆರಾಧನೆಯನ್ನು ಗಮನಿಸಿದ್ದರೆ. ತಮ್ಮ ತಮ್ಮಲ್ಲಿ ಕೆಲವು ಅಭಿಪ್ರಾಯಗಳನ್ನು ಒಂದೊಂದು ರೀತಿಯಲ್ಲಿ ವ್ಯಕ್ತಪಡಿಸುವುದನ್ನು ತಿಳಿಯಬಹುದು. ಕುವೆಂಪುರವರಿಗೆ ಹೆಚ್ಚಾಗಿ ಬೀರಿದಂತ ಪರಿಣಾಮ ಎಂದರೆ ಮಲೆನಾಡು ಇಲ್ಲಿನ ಪ್ರತಿಯೊಂದು ವಸ್ತುಗಳು ಅವರನ್ನೇ ಆಕರ್ಷಿಸಿದಂತಹ ಗುಣಗಳಾಗಿವೆ. ಇಲ್ಲಿನ ಸೊಬಗು, ಉಲ್ಲಾಸವಾದ ವಾತಾವರಣ, ಇಂಪಾದ ಧ್ವನಿ ಆಕಾಶದಂತಹ ಹಸಿರು. ಜುಳುಜುಳುವಿನಂತೆ ಹರಿಯುವ ನದಿ, ಸ್ವಾಗತ ಕೋರುವಂತಹ ಉತ್ತಮವಾದ ಮರಗಳು, ಕಣ್ಣಿಗೆ ತಂಪನ್ನು ನೀಡುವಂತಹ ವನ್ಯ ಮೃಗಗಳ ಸಾಲು, ನಿಶಬ್ಧತೆಯಿಂದ ಕೂಡಿದ ಬಂಡೆಗಳನ್ನು ಇನ್ನೂ ಮುಂತಾದ ವಿಷಯಗಳು ಕುವೆಂಪುರವರ ಮೇಲೆ ಬೀರಿವೆ. ಜೊತೆಗೆ ಮನೆಯಲ್ಲಿನ ಸಂಪ್ರದಾಯಕತೆ, ತನ್ನ ಸುತ್ತಮುತ್ತಲಿನವರ ಪ್ರೀತಿ, ವಿಶ್ವಾಸಗಳನ್ನು ಗಳಿಸಿಕೊಂಡು ತಮ್ಮ ಮಲೆನಾಡಿನ ಪ್ರಕೃತಿಯ ಚಿತ್ರಣವನ್ನು ಪ್ರಕೃತಿಗೆ ನೀಡಿದ್ದಾರೆ. ಒಂದು ಮಾತು ಹೇಳಿದಂತೆ ಕೆರೆಗೆ ನೀರನ್ನು ಕೆರೆಗೆ ಚೆಲ್ಲು; ಆದರೆ ಇಲ್ಲಿ ಮಲೆನಾಡಿನ ಪ್ರತಿಯೊಂದು ವಸ್ತುಗಳು ಅವರ ಮೇಲೆ ಬೀರಿದಂತಹ ವಿಚಾರಗಳಾಗಿವೆ.

## ಮಲೆನಾಡಿನ ವರ್ಣನೆ :

ಮಾನವ ನಿಸರ್ಗದ ಶಿಶು. ಅದೇ ಅವನನ್ನು ಪೋಷಿಸುವ ತಾಯಿ. ಕಲಿಸುವ ಗುರು ಮನುಷ್ಯನ ಬದುಕು ನಡೆಯುವಂತಿಲ್ಲ. ಅರಿತೋ ಅರಿಯದೆಯೋ ಪ್ರತಿಕ್ಷಣವೂ ಅವನನ್ನು ತನ್ನ ಜೀವನ ಪೂರ್ತಿಗಾಗಿ ನಿಸರ್ಗದ ಸಹಾಯವನ್ನು ಪಡೆಯುತ್ತಾನೆ. ಏಕೆಂದರೆ ಕುವೆಂಪುರವರು

ಅವರಲ್ಲಿ ಇದ್ದಂತಹ ಬರವಣಿಗೆಯ ಚಿಲುಮೆ ನೀರಿನಂತೆ ನಿಧಾನವಾಗಿ ಚಿಮ್ಮುತ್ತ ಮಲೆನಾಡಿನಲ್ಲಿ ಭೂರ್ಗರತವಾಗಿ ಹರಿಯಿತು. ಈ ಮಾತು ಏಕೆ ಹೇಳುತ್ತಿದ್ದೇನೆ ಎಂದರೆ ಮಲೆನಾಡಿನ ಚಿತ್ರಗಳು ಎಂಬ ಪ್ರಬಂಧ ಸಾಹಿತ್ಯದಲ್ಲಿ ಕವಿಯು ಒಂದೊಂದು ಪಾತ್ರ ಒಂದೊಂದು ವಿಶೇಷತೆಯಿಮದ ಕೂಡಿದೆ. ಅಲ್ಲಿನ ವಾತಾವರಣವೂ ವರ್ಣನೆಗೆ ಅವಕಾಶ ಮಾಡಿಕೊಟ್ಟಿದೆ. ಕುವೆಂಪು ರವರು ತಮ್ಮಲ್ಲಿ ಇದ್ದಂತಹ ವರ್ಣಾತ್ಮಕ ಬರವಣಿಗೆ ಬರೆಯಲು ತಂದೆ ತಾಯಿ ಗುರು ಗೆಳೆಯ ಆರಾಧ್ಯ ಶಕ್ತಿ ಸಮಸ್ತವೂ ಆಗಿದೆ, ಇಲ್ಲಿ ಕವಿಯು ಮಲೆನಾಡಿನ ಬಗ್ಗೆ ಕೆಲವು ವರ್ಣನೆ ಮಾಡಿದ್ದಾರೆ.

"ಮಲೆಯ ನಾಡೆನಗೆ ತವರು ಮನೆ; ಕಾಡು ದೇವರ ಬೀಡು ಗಿರಿಯ ಮುಡಿ ಶಿವನ ಗುಡಿ; ಬನವಣ್ಣೆ ಮೊದಲಿನಾಮನದನ್ನೆ" ಎಂಬ ಕವಿವಾಣಿಯಲಿ ಹುಸಿಯಿಲ್ಲ. ಪ್ರಕೃತಿಯಾರಾಧನೆಯ ಪರಮಾರಾಧನೆ;

ಗಿರಿವನ ಪ್ರೀತಿ ತಾಂದೈವ ಕೃಪೆದಲ್

ನಿಸರ್ಗದ ಮಡಿಲು ಒಂದಲ್ಲ ಹಿನ್ನೆಲೆ, ವಸ್ತು, ಸೌಂದರ್ಯ ವರ್ಣನೆಗೆ ಮೂಲವಾಗಿದೆ. (ದೆ.ಜ.ಗೌ. ಕುವೆಂಪು ದರ್ಶನ, ಪು. 612–632)

ಮಲೆನಾಡಂದರಮಳ ಅದರ ವಿಶ್ವರೂಪವನ್ನು ಅಲ್ಲಿಯಂತೆ ಬೇರೆಲ್ಲಿಯೂ ಕಾಣಲಾಗದು. ಹೂಮಳೆ ಸೋನೆ ಮಳೆಯಿಂದ ಹಿಡಿದು ಭೋರ್‌ಮಳೆ ಹೊಯ್ಮಳದಡಿಗೆ ಮಳೆಯ ತನಕ ಐದಾರು ತಿಂಗಳು ರಪರಪನೆ ಸುರಿಯುತ್ತದೆ. ನೋಡುತ್ತಿದ್ದ ಹಾಗೆಯೇ ನೀಲ ನಿರ್ಮಲವಾಗಿ ಎಲ್ಲಿಯೋ ದೂರದೂರದಲ್ಲಿ ಒಂದೆಡೆ ಮಾತ್ರ ಸಣ್ಣ ಸಣ್ಣ ಬೆಳ್ಳುಗಿಲುಗಳಿಂದ ಖಚಿತವಾಯಿತು. ಆ ಕಿರಿಯ ಬಳಿ ಮುಗಿಲು ತೋಳಗಳ ಹಿಂಡಿನ ಬರುವಿಕೆಯನ್ನು ಅರಿತು ಭಯ ಭ್ರಾಂತವಾಗಿ ಮೇವು ಬಟ್ಟಟೆ ಓಡುವ ಬಿಳಿಯ ಕಂಬಳಿ ಕುರಿಗಳ ಮಂದೆಯಂತೆ; ದಿಕ್ಕು ದಿಕ್ಕಿಗೆ ಚೆದುರಿ ಬೆದರಿ ಧಾವಿಸುವುದು ಅವುಗಳಿಗೆ ಬದಲಾಗಿ ಧೂಮ ವರ್ಣದ,

ಧೂಮರೂಪದ, ಮಹಾ ಶಿಲಾ ಖಂಡಗಳಂತೆ ಮೃದು ಕಠಿಣವಾಗಿದ್ದ ಮುಂರ್ಗ್ಗಾಲದ ಸಕರಿಮುಗಿಲ ಸೇನೆ ಧೀರವಾಗಿ, ಗಂಭೀರವಾಗಿ ಭೀಚಣವಾಶಗಿ ವೇಗವಾಗಿ ಆಕ್ರಮಿಸಿತು.

ಕುವೆಂಪುರವರು ಮಲೆನಾಡಿನಲ್ಲಿ ಕಲ್ಲಿಗೆ, ಮರಗಳಿಗೆ, ಪ್ರಾಣಿವರ್ಗ, ಮನುಷ್ಯವರ್ಗ ಒಂದೊಂದು ವರ್ಗಕ್ಕೆ ಒಂದೊಂದು ರೀತಿಯಲ್ಲಿ ವರ್ಣನೆಗೆ ಮುಂದಾಗಿದ್ದಾರೆ. ತಮ್ಮ ಕೃತಿಗಳಲ್ಲಿ ಈ ರೀತಿ ವರ್ಣಿಸಿದ್ದಾರೆ. ವಾಯು ಮಂಡಲವು ನಿರ್ಮಲವಾಗಿತ್ತು ಆಕಾಶವೂ ಪ್ರಸನ್ನವಾಗಿತ್ತು. ಮಳೆಯಲ್ಲಿ ಮಂದ ಗಿಡಮರ ಬಳ್ಳಿಗಳ ಹಸುರೆಲೆಗಳಿಗೆ ಮತ್ತಿನಿತು ಹಸುರೇರಿ ಕಾಡುಗಳೆಲ್ಲ ಕಳಕಳನೆ ನಗುವಂತಿದ್ದವು. ಕವಿಯೂ ತನ್ನ ಮನಸ್ಸಿನಲ್ಲಿ ವರ್ಣನೆಯನ್ನು ಹೆಚ್ಚಾಗಿ ಬಳಸಿಕೊಂಡಿರುವುದು ಈ ರೀತಿ ತಿಳಿಯಬಹುದು. ನೆಲದ ಹುಲ್ಲಿನ ಮೇಲೆಯೂ, ಬದಿರು ಮಳೆಗಳಲ್ಲಿಯೂ, ಬಳ್ಳಿಯು, ಕುಡಿಗಳಲ್ಲಿಯೂ; ಎಲೆಗಳ ತುದಿ ತುದಿಯಲ್ಲಿಯೂ, ಜೇಡರ ಬಲೆಯಲ್ಲಿಯೂ ನೂರು, ಸಾವಿರ ಕೋಟಿ–ಕೋಡಿ ಹನಿಗಳು ಜೀವಿಸುವುದಕ್ಕಿಂತಲೂ ಹೆಚ್ಚಾದ ಜೀವನದ ಗುರಿ ಮತ್ತೊಂದಿಲ್ಲ ಎಂಬಂತೆ ತೋರುತ್ತದೆ.

ಮಲೆನಾಡಿನ ವರ್ಣನೆಯಲ್ಲಿ ಪರ್ವತ ಶ್ರೇಣಿಯನ್ನು ಕುರಿತು ಚೈತ್ರಮಾಸದ ಲಿಪಿನ ರಾಜ, ಪರ್ವತ ಶ್ರೇಣಿ; ಪಾತ್ರ : ಸವೆಯ ಕಾಡು ಕತ್ತಲೆಯಿಂದ ನಿಧಾನವಾಗಿ ಹೊರಹೊಮ್ಮುತ್ತಿತ್ತು. ಬಾನು ಮೆಲೆಲಮೆಲ್ಲನೆ ಬೆಳಗಾಗಿ ಸಾಧಾರಣ ಪ್ರಕಾಶದ ತಾರೆಗಳಲ್ಲಿ ಅಡಗಿ ಸಪ್ತರ್ಷಿ ಮಂಗಳದ ನಕ್ಷತ್ರಗಳು ಚಿತ್ರಾ ಮತ್ತು ಸ್ವಾತಿಕ್ಷತ್ರಗಳೇ ಮೊದಲಾದ ಪ್ರಥಮ ಮತ್ತು ದ್ವಿತೀಯ ವರ್ಗಕ್ಕೆ ಸೇರಿರುವ ಹಲ ಕೆಲವು ತಾರೆಗಳು ಮಾತ್ರ ರಾರಾಜಿಸುತ್ತಿದ್ದವು.

ಪ್ರತಿಯೊಂದು ಜೀವಿಯಿಂದ ಹಿಡಿದು ವನದೇವಿಯ ತನಕ ಮಲೆನಾಡಿನ ದೃಶ್ಯಾವಳಿಗಳನ್ನು ಕುವೆಂಪು ತಮ್ಮ ಉತ್ತಮವಾದ ಬರವಣಿಗೆಯನ್ನು ಬರೆದಿದ್ದಾರೆ. ವನದೇವಿಯ ಹೃದಯ ವೀಣೆಯ ತಂತಿಗಳನ್ನು ದೂಯುವಂತೆ ಕಾಜಾಣಗಳು ಆಲಾಪನೆ ಮಾಡತೊಡಗಿದವು. ಸುಮ್ಮನೆ ನಿಂತಿರುವ ಮರಗಳು ಅಲ್ಲಿನ ಹೂವಿನ ಮಕರಂದಕ್ಕೆ ಜೇನು ಹುಳುವಿನ ಮುತ್ತಿಗೆ ತಮ್ಮ ಒಂದೊಂದು ವರ್ಗಕ್ಕೂ ಕ್ರಿಯಾ ಶೀಲವಾದ ವರ್ಣನೆ ಮಾಡಿದ್ದಾರೆ.

ಕುವೆಂಪುರವರು ಹೆಚ್ಚಿನ ಒಲವನ್ನು ಮಲೆನಾಡಿನ ಬೆಟ್ಟಗುಡ್ಡಗಳನ್ನು ತಮ್ಮ ಕಾವ್ಯಗಳಲ್ಲಿ ಚಿತ್ರಿಸಿದ್ದಾರೆ. ಹೇಗೆಂದರೆ ಪ್ರಕೃತಿ ಸೌಂದರ್ಯವನ್ನು ಅನುಭವಿಸಿ ಸಹ್ಯಾದ್ರಿಯ ಮಡಿಲಲ್ಲಿ ತಮ್ಮದೆ ರಚನೆ ಮಾಡಿದ

ಕುವೆಂಪುರವರ ಕಾವ್ಯಗಳಲ್ಲಿ ಅವರ ನಿಜವಾದ ಅಭಿಪ್ರಾಯದಲ್ಲಿ ನಿಸರ್ಗದ ಮಡಿಲಿಗೆ ಸೋಕದವ್ಯಕ್ತಿಯಿಲ್ಲ ಅಂತಹ ವ್ಯಕ್ತಿ ಕುವಂಪು ಸದಾಕಾಲ ಮಲೆನಾಡಿನ ವೈಭವವನ್ನು ಎತ್ತರಕ್ಕೆರಿಸಿದರು. ಪ್ರಕೃತಿ ಮಾತೆಯ ಸೌಂದರ್ಯವನ್ನು ತಮ್ಮ ಅನಿಸಿಕೆಗಳನ್ನು ಒಂದಲ್ಲ ಒಂದು ಕೃತಿಯಲ್ಲಿ ಮಲೆನಾಡಿನ ವಸ್ತು, ವಿಷಯ ವಿಚಾರಗಳನ್ನು ಬಳಸಿಕೊಂಡಿದ್ದಾರೆ. ಇಂತಹ ಕೃತಿಕಾರರು ಬೆರಳಿಕೆಯಷ್ಟೆ ಮಾತ್ರವಾಗಿದೆ. (ಪ್ರೊ. ಪ್ರಭುಶಂಕರ, ಕೃತಿಶೀಲ, ಪು. 358)

ಮಲೆನಾಡಿನಲ್ಲಿ ಕುವೆಂಪುರವರು ಅನೇಕ ರೀತಿಯಲ್ಲಿ ವರ್ಣಿಸುವುದಕ್ಕೆ ಕಾರಣಗಳು ವ್ಯಕ್ತವಾಗುತ್ತವೆ. ಹೂವು, ಸೂರ್ಯೋದಯ, ಸೂರ್ಯಾಸ್ತ, ಬಯಲು, ಬೆಳದಿಂಗಳು, ಆತ್ಮ ಪರಮಾತ್ಮ ಇವನ್ನೇ ವರ್ಣಿಸುತ್ತಾ ವಿರಮಿಸಿದ್ದಾರೆ ಅವರು ಯುಗದ ಕವಿಯಾಗಿ ಕೋಟ್ಯಾಂತರ ಜನರ ಹೃದಯದಲ್ಲಿ ಅಡಗಿಕೊಳ್ಳುತ್ತಿರಲಿಲ್ಲ. ಇಂತಹ ಕೃತಿಕಾರ ಹೆಚಾಗಿ ಒಲವು ತೋರುವುದು ಮಲೆನಾಡಿನ ವಿಚಾರಗಳನ್ನು ತಿಳಿಸುತ್ತಾ ಹೋಗುತ್ತಾರೆ. ಕೆಲವು ಜನಗಳ ಬರಿ ಕಲ್ಲು, ಮರ ಬೆಟ್ಟ ಗುಡ್ಡ, ಬಯಲು, ಇಂತಹ ವಾತಾವರಣದಲ್ಲಿ ಬದುಕಲು ಅಸಾಧ್ಯ ಎಂಬ ಮಾತುಗಳನ್ನಾಡುತ್ತಾರೆ. ಆದರೆ ಅಂತಹ ಜನರಿಗೆ ಬದುಕನ್ನು ರೂಪಿಸುವಲ್ಲಿ ಮಲೆನಾಡಿನ ವರ್ಣನೆಯನ್ನು ಅವರ ಕಾವ್ಯಗಳಲ್ಲಿ ಓದಿದಾಗ ಆಡಿದ ಜನಗಳು ನೋಡುವ ಹಾಗೆ ಮಾಡಿದ್ದಾರೆ ನಮ್ಮ ಕುವೆಂಪುರವರು.

ಮಲೆನಾಡಿನ ವರ್ಣನೆಗೆ ಕವಿಯೂ ತನ್ನ ಅನುಭವಗಳನ್ನು ಅನುಭವಿಸಿ ಮೂಡಿಬಂದಿರುವಂತಹ ವಿಷಯಗಳನ್ನು ತಿಳಿಸಲು ಹೋಗಿದ್ದಾರೆ. ಕಾವ್ಯವನ್ನು ರಚಿಸುವಲ್ಲಿ ಕುವೆಂಪುರವರು ತಮ್ಮ ಪಾತ್ರಗಳನ್ನು ಮಲೆನಾಡಯಾವುದೆ ಒಂದು ಭಾಗವನ್ನು ಅಥವಾ ವಸ್ತುವನ್ನು ಅಳವಡಿಸಿಕೊಂಡು ವರ್ಣಿಸುವಲ್ಲಿ ಯಶಸ್ವಿಯಾಗಿದ್ದಾರೆ. ಎಂದು ಹೇಳಬಹುದು. ಅವರು ಬರೆದಿರುವಂತ ಕೃತಿಯಲ್ಲಿ ಕಾಣಬಹುದಾದಂತಹ ಅಂಶಗಳನ್ನು ಗಮನಿಸಬೇಕು. ಏಕೆಂದರೆ ವರ್ಣನೆಯೂ ತುಂಬಾ ಅತ್ಯಾವಶ್ಯಕವಾದ ಅಂಶಗಳನ್ನು ಮಾತ್ರ ವರ್ಣಿಸುವಲ್ಲಿ ಮುಖ್ಯವಾಗುತ್ತದೆ. ಏಕೆಂದರೆ ನಾವು ಓದುವಂತಹ ಸಾಲುಗಳಲ್ಲಿ ಬರುವ ಪಾತ್ರಗಳನ್ನು ನೆನಪಿಟ್ಟುಕೊಳ್ಳುವ ಉದ್ದೇಶವಿರಬಹುದದೆಂಬ ಅಂಶವಾದ್ದರಿಂದ ವರ್ಣನೆಗೆ ಹೆಚ್ಚಿನ ಆದ್ಯತೆ ನಿಡಿದ್ದಾರೆ.

ಕವಿಯೂ ಅನುಭವಗಳ ಮೂಲಕ ಅನಿಸಿಕೆಗಳನ್ನು ತಿಳಿಸಲು ಸಾಧ್ಯ ಎಂಬ ಮಾತು ತುಂಬಾ ಸ್ವಾರಸ್ಯವಾಗಿದೆ. ಏಕೆಂದರೆ ವರ್ಣನೆ ಎಂಬುದು ವಸ್ತು, ವಿಷಯ ಹಕ್ಕಿಯ ಹಾಡು, ಹೊಂದಿಸಿ ಚೆಲುವು,

ಪ್ರಕೃತಿ ಪ್ರೀತಿ, ಬಾಂದವ್ಯಗಳು ರೂಪುಗೊಳ್ಳುತ್ತವೆ. ಇಂತಹ ಯಾವುದಾದರೂ ಒಂದು ಅಂಶವನ್ನು ಆರಿಸಿಕೊಂಡು ಒಂದು ಸಂದರ್ಭದಲ್ಲಿ ವ್ಯಕ್ತಪಡಿಸುವ ಅಂಶವಾಗಿದೆ. ಮಲೆನಾಡನ್ನು ವರ್ಣಿಸುವುದು ಅಷ್ಟೊಂದು ಸುಲಭದ ಮಾತಲ್ಲ. ಏಕೆಂದರೆ ಅಲ್ಲಿನ ಬದುಕಿನ ಚಿತ್ರಣ ತುಂಬಾ ಕಷ್ಟಕರವಾಗಿರುತ್ತದೆ. ಯಾಕೆ ಈ ಮಾತನ್ನು ಹೇಳುತ್ತಿದ್ದೇನೆ. ಎಂದರೆ ಯಾವ ಕಡೆ ನೋಡಿದರೂ ಬೆಟ್ಟ-ಬಯಲು ಗಿರಿ, ವನ, ಪ್ರಾಣಿ, ಪಕ್ಷಿಗಳೆ ಕಂಡುಬರುತ್ತವೆ. ಇಂತಹ ವಿಚಾರಗಳನ್ನು ಓದುಗರು ಓದಬಹುದೇ ಹೊರತು ಅನುಭವಿಸುವುದರ ಮೂಲಕ ವರ್ಣನೆಗೆ ದಾರಿಯಾಗುತ್ತದೆ. ಮಲೆನಾಡಿನ ಭಾಗದಲ್ಲಿ ಕಂಡುಬರುವಂತಹ ವನದ ಚೆಲುವನ್ನು ಕುವೆಂಪುರವರು ತುಂಬಾ ಸೊಗಸಾಗಿ ಚಿತ್ರಿಸಿದ್ದಾರೆ. "ಕೋಗಿಲೆಯ ಕಂಠಕ್ಕೆ ಸ್ವರ್ಣ ಪದಕವ ತೊಡಿಸಿ ನೇಣು ಬಿಗಿಯುವುದೇಕೆ? ಬಹುಮಾನವೆಂದು ಹಾರಭಾರಕೆ ಗೋನು ಕುಸಿದು ಕುಗ್ಗಲುಗಾನ ಕೊರಗಿ ಕರ್ಕಶವಾಗಿ ನರಳುವುದು ನೊಂದು" (ಆರ್.ಡಿ.ಜ, ರಾಷ್ಟ್ರಕವಿ ಕುವೆಂಪು, ಪು. 31) ಇಂತಹ ಕವನದ ಸಾಲುಗಳು ಪ್ರತಿಯೊಂದು ವರ್ಗಕ್ಕೂ ಅನ್ವಯಿಸುವಂತಹ ಮಾತುಗಳನ್ನು ತಿಳಿಸಿದ್ದಾರೆ.

ಕವಿಯು ತನ್ನ ವರ್ಣನೆಯ ಬರವಣಿಗೆಯನ್ನು ಬರೆಯುವುದರ ಮೂಲಕ ಎಲ್ಲರ ಮನಸ್ಸಿನ ಮೇಲೆ ಬಂದು ಹೋಗುತ್ತಾರೆ. ಇಂತಹ ಸಾಲುಗಳ ನೆನಪಿಟ್ಟುಕೊಳ್ಳುವಂತಹ ವಿಚಾರಗಳನ್ನು ತಿಳಿಸಲು ಕವಿಯೂ ಹೆಚ್ಚಾಗಿ ಒಲವೂ ತೋರಿಸಿದ್ದಾರೆ. ಕುವೆಂಪುರವರು ಹುಟ್ಟಿನಿಂದ ಮಲೆನಾಡಿನಲ್ಲಿತಾವು ಕಂಡು-ಅರಿಯುವಂತಹ ವಿಷಯಗಳನ್ನು ತಮ್ಮ ಕೃತಿಗಳಲ್ಲಿ ಒಂದು ಪಾತ್ರವರ್ಗವನ್ನು ವರ್ಣಿಸುತ್ತಲೇ ಹೋಗುತ್ತಾರೆ. ಏಕೆಂದರೆ ಮೊದಲೆ ಹೇಳಿದಂತೆ ಪಾತ್ರದ ವಿಶಿಷ್ಟತೆಯೂ ಅರ್ಥಪೂರ್ಣತೆಯಿಂದ ಕೂಡಿರುತ್ತದೆ. ಇಂತಹ ಮಲೆನಾಡಿನ ವರ್ಣನೆಗೆ ಕವಿಯೂ ವರ್ಣೀಸುವುದಕ್ಕೆ ಆ ಸರಸ್ವತಿ ಒಲಿದಳೆ ಎಂಬ ವಿಚಾರವನ್ನು ಗಮನಿಸಬೇಕಿದೆ.

ಮಲೆನಾಡು ಮಳೆ ಪ್ರಸಿದ್ಧಿಯಾದರೆ ಅಲ್ಲಿ ಮಳೆಯೇ ವಾರ, ತಿಂಗಳುಗಟ್ಟಲೆ ಹೆಡಬಿಡದಂತೆ ಸುರಿಯುವ ಮಳೆ. ಒಮ್ಮೊಮ್ಮೆ ಅದು ಪ್ರಳಯ ಸ್ವರೂಪವನ್ನು ಪಡೆದರೂ, ಅದಿಲ್ಲದೆ ಮಲೆನಾಡಿನ ಬದುಕು ಅಸಹನೀಯವಾಗುತ್ತದೆ. ಜೀವನ ಸಮಸ್ತಕ್ಕೂ ಅದೇ ಜೀವ ಸತ್ವವಲ್ಲವೇ? ನಿಸರ್ಗದ ವೈಭವಕ್ಕೂ ಅದೇ ಪ್ರಮಾಣ. ಪ್ರಕೃತಿ ವ್ಯಾಪಾರಗಳು ಮಾತ್ರವಲ್ಲ. ಆ ಜೀವನ ಕ್ರಿಯಾಶೀಲವಾಗುವುದೇ ಮಳೆಗಾಲದಲ್ಲಿ ಗದ್ದೆ ತೋಟಗಳ ಕೆಲಸದ ಜೊತೆಗೆ ಮೀನು ಬೇಟೆಯು ಇರುತ್ತದೆ. ಬರುಮಳೆಯಲ್ಲಿ ಮಿಂದು ಮಿಂದು

ಸೂರ್ಯರಶ್ಮಿಯ ಸುಳಿವೂ ಅಡಗಿ ಹೋಗಿತ್ತು. ಬಯಲುಗಳ ಮೇಲೆ ಹಸುರುಗಂಬಳಿ ಸಾಸಿದಂತೆ ಹುಲ್ಲು ಹಬ್ಬಿ ಬೆಳೆದಿತ್ತು. ಸುತ್ತಲು ಮಹಾಪರ್ವತದ ದುರ್ಗದ ಗೋಡೆಗಳಂತೆ ಎತ್ತರವಾಗಿ ಎದ್ದು ನಿಂತಿದ್ದ ಬೆಟ್ಟಗಳನ್ನು ಬಿಗಿದಪ್ಪಿದ ಕಾಡುಗಳ ಸಾಲು ಹಚ್ಚನೆ ಹಸುರಾಗಿ ರಮಣೀಯವಗಿತ್ತು. ಗದ್ದೆಗಳಲ್ಲಿ ಅಲ್ಲಲ್ಲಿ ಕುಪ್ಪ ಕುಪ್ಪೆಯಾಗಿ ಹಾಕಿದ ಗೊಬ್ಬರದ ರಾಸಿಯಲ್ಲಿ ಹುಳುವಿನ ಬೇಟೆಯ ದೃಶ್ಯ ಸಹಸ್ರ ಸಹಸ್ರ ವರ್ಷಗಳಿಂದ ಮಲೆನಾಡಿನಲ್ಲಿ ಮಳೆ ಧಾರಾಕಾರವಾಗಿ ಸುರಿಯುತ್ತಿದೆ. ಧಗೆ ಕಡಿಮೆಯಾಗುತ್ತದೆಂಬ, ಬೆಳೆಗೆ ಅನಿವಾರ್ಯವೆಂಬ ಕಾರಣದಿಂದ ಜನ ಅದನ್ನು ಸ್ವಾಗತಿಸುತ್ತಾರೆ. ಅದರದು ಕುವೆಂಪು ಅವರಿಗಾದಂತೆ ಬಹು ಜನರ ಅನುಭವದ ಭಾಗವಿಲ್ಲ; ಸುಂದರಾಭಿವ್ಯಕ್ತಿಯ ವಸ್ತುವಾಗಿಲ್ಲ. ವೈಶಾಖಾನಂತರ ಗಮನ ಕ್ರಮ ಕ್ರಮೇಣ ವರ್ಣನೆಯೂ ಇಲ್ಲಿ ಮುಖ್ಯವಾಗಿದೆ. (ದೆ.ಜ.ಗೌ, ಕುವೆಂಪು ದರ್ಶನ, ಪು. 612–632)

ಮಲೆನಾಡಿನ ವರ್ಣನೆಗೆ ಕೆಲವು ರೀತಿಯ ವಿಚಾರಗಳನ್ನು ಹೇಳಲು ಬಯಸುತ್ತೇನೆ. ಏಕೆಂದರೆ ಇಲ್ಲಿನ ಸನ್ನಿವೇಶಗಳು ಕೆಲವು ಯುವಕರನ್ನು ಹಿಂಬಾಲಿಸುತ್ತವೆ. ಇಲ್ಲಿ ತಿಮ್ಮ, ಓಬು, ಕೆಲವು ಜನಗಳು ಮಲೆನಾಡಿನಲ್ಲಿ ಅರಣ್ಯದೊಳಗೆ ಮುಂದಾದಗ ಅವರೆಲ್ಲ ಭಯದ ವಾತಾವರಣ ಮೂಡುತ್ತದೆ. ಅಲ್ಲಿನ ಪರಿಸರವು ಒಂದುದೊಂದು ರೀತಿಯಲ್ಲಿ ರೂಪುಗೊಳ್ಳುತ್ತದೆ. ಇಂತಹ ಕೆಲವು ರೀತಿಯ ವಿಚಾರಗಳು ಮಲೆನಾಡಿನಲ್ಲಿ ನಡೆಯುವಂತಹ ಘಟನೆಗಳನ್ನು ಕುವೆಂಪುರವರು ಚಿತ್ರಿಸಿದ್ದಾರೆ. ಅವರು ಕೆಲವು ವಿಚಾರವೇದಿಕೆಯಲ್ಲಿ ತಿಳಿಯಲು ಬಯಸುತ್ತಾರೆ. ಅವೇನೆಂದರೆ, ಕುವೆಂಪು ಹೇಳಿದ್ದು ಕೊ.ಚೆ. ಮೈಸೂರಿಗೆ ಹೋದಾಗ ಕುವೆಂಪು ಮನೆಯ ತೋಟದಲ್ಲಿ ಚೆಗ್ತ್ ಗಿಡಗಳನ್ನು ನೋಡಿ ಮೆಚ್ಚಿಗೆ ಸೂಚಿಸಿದ್ದಾರೆ. ಇವೆಲ್ಲಾ ಏನು, ಮಲೆನಾಡಿನ ಕಾಡನ್ನು ನೋಡಬೇಕು... ದೇವರು ಈ ಮನುಷ್ಯ ಪ್ರಜ್ಞೆ ಇಟ್ಟು ಒಂದು ಕಾಡು ಮೃಗವನ್ನಾಗಿ ಮಾಡಿದರೆ ಮಲೆನಾಡು ಕಾಡಿನಲ್ಲಿ ನಾನು ಸುಖವಾಗಿ ಇದ್ದುಬಿಡುವೆ. ಎಂದರಂತೆ ಇಂತಹ ಅಪರೂಪದ ಮಾತುಗಳು ಮಲೆನಾಡಿನ ವರ್ಣನೆಗೆ ಕವಿ ವರ್ಣಿಸುವಂತಹ ಮುಖ್ಯ ವಿಷಯ ಓದುಗರಲ್ಲಿ ಮಲೆನಾಡಿನ ವರ್ಣನೆ ಹೇಗಿತ್ತೆಂಬ ಅರಿವು ಮೂಡುತ್ತದೆ.

ಮಲೆನಾಡಿನ ಚಿತ್ರಗಳಲ್ಲಿ ಮಲೆನಾಡನ್ನು ವರ್ಣಿಸುವುದೆ ಕವಿಗೆ ಹಬ್ಬವಾಗಿ ಇರುತ್ತಿತ್ತೇನೋ ನನ್ನ ಭಾವನೆ. ಏಕೆಂದರೆ ಇಂತಹ ವರ್ಣನೆಯನ್ನು ನೋಡುವುದರಿಂದ ಬರುವುದಿಲ್ಲ. ಮಲೆನಾಡಿನಲ್ಲಿ

ಅನುಭವದಿಂದ ಒಂದೊಂದು ರೀತಿಯ ವಿಷಯಗಳು ರೂಪುತಾಳಿವೆ. (ಕುವೆಂಪು– ಮಲೆನಾಡು, ನೆನಪಿನ ದೋಣಿಯಲ್ಲಿ, ಪು. 654)

'ಮಲೆನಾಡಿನ ಚಿತ್ರಗಳ'ಲ್ಲಿ ಜೇನು ಬೇಟೆಯ ಪ್ರಸಂಗವನ್ನು ಹಂತ ಹಂತವಾಗಿ ಕವಿಯು ಬಿಚ್ಚಿಡುತ್ತ ಹೋಗುತ್ತಾರೆ. ಏಕೆಂದರೆ ಇಲ್ಲಿ ಮಲೆನಾಡು ಈ ರೀತಿ ಹೆಮ್ಮರವಾಗಿ ಹಬ್ಬಿದೆ ಎಂದು ಹೇಳಲು ಇಚ್ಚಿಸುತ್ತಾನೆ. ದಟ್ಟವಾಗಿ ಬೆಳೆದ ಕಾಡು ಅಲ್ಲಿ ವ್ಯಕ್ತಿಗಳ ಕಲರವ, ಹರಿಯುವ ನದಿಗಳು, ಓಡಾಡುವ ಪ್ರಾಣಿಗಳು, ಇಂತಹ ವಾತಾವರಣವು ನೋಡುಗರಿಗೆ ಇಲ್ಲೆ ಇದ್ದುಬಿಡಬೇಕು ಎನಿಸುತ್ತದೆ,

ಏಕೆಂದರೆ ಕವಿಯು ತಾನು ಅನುಭವಿಸಿದ ವಿಚಾರಗಳನ್ನು ಎಳೆಎಳೆಯಾಗಿ ಬಿಚ್ಚಿಡುತ್ತಾರೆ. ಇಲ್ಲಿನ ದೃಶ್ಯಾವಳಿಗಳು ಮಲೆನಾಡ ವರ್ಣನೆಗೆ ಇಂತಹ ಮತ್ತೊಂದು ವರ್ಣನೆ ಈ ರೀತಿ ತಿಳಿಸಿದ್ದಾರೆ.

ಮರುಭೂಮಿಗೂ ಮಲೆನಾಡಿಗು ಎಷ್ಟು ವ್ಯತ್ಯಾಸ! ಉತ್ತರ ಧ್ರುವದ ಕಟುಸತ್ಯಕ್ಕೂ ಅರೇಬಿಯಾದ ಉಗ್ರೋಷ್ಣಕ್ಕೂ ಎಷ್ಟು ವ್ಯತ್ಯಾಸ! ಪ್ರಕೃತಿ ಒಂದೆಡೆ ರಮಣೀಯಾದರೆ ಮತ್ತೊಂದೆಡೆ ರುದ್ರ ಒಮ್ಮೆ ಇಂದುವೆದನೆ ಕುಂದರದನೆ ಪ್ರಕೃತಿ ರೂಪಿಸಿ, ಇನ್ನೊಮ್ಮೆ [ರಕ್ತಮುಖಿ  ರಕ್ತ ಸಖಿ, ಪ್ರಕೃತಿ ರೂಪಸಿಯಾಗುತ್ತಾಳೆ. ಸರ್ವದಾ ಕಷ್ಟ ಕ್ಲೇಶ ಕಂಟಕಮಯವಾದ ಕ್ರೂರ ಪ್ರದೇಸದಲ್ಲಿ ದುಡಿದು ಬದುಕುವ ಕವಿಗೆ ಪ್ರಕೃತಿ! ರಾಕ್ಷಸಿಯಾಗುತ್ತಾಳೆ. ಹೀಗೆ ಕವಿ ಮತ್ತು ಪ್ರಕೃತಿ ಎಂಬ ಎರಡು ಪದಗಳಿಗೆ ಬಹುಮುಖಿಯಾಗುವ ಕವಿಯ ದೃಷ್ಟಿಯಲ್ಲಿ ಪ್ರಕೃತಿ ಹೇಗೆ ಕಾಣುತ್ತಿದೆ ಇಂತಹ ವರ್ಣನೆಯನ್ನು ಕವಿ ಮನಮೋಹಕವಾಗಿ ಚಿತ್ರಿಸಿದ್ದಾನೆ. ಕವಿಯ ಕೆಲವು ಅನುಭವಗಳನ್ನು ತಾನು ಅನುಭವಿಸಿದ ವಿಚಾರಗಳನ್ನು ತಾನು ಜೊತೆ ಜೊತೆಯಾಗಿ ವಿವರಿಸುತ್ತಾರೆ, ಇಂತಹ ವಿಚಾರಗಳನ್ನು ಮನಸ್ಸಿಗೆ ಮಲೆನಾಡಿನ ವರ್ಣನೆಯನ್ನು ವರ್ಣಿಸುವುದು ಅಷ್ಟೊಂದು ಸುಲಭವಲ್ಲ ಎಂಬುದು ಓದುಗರಿಗೆ ಬಿಟ್ಟಿದ್ದು. (ಕುವೆಂಪು, ಸಮಗ್ರ ಗದ್ಯ – ಸಂಪುಟ – 1, ಪು. 286)

## ಕುವೆಂಪು ಕಾವ್ಯಗಳಲ್ಲಿ ಪ್ರಕೃತಿಯ ಪ್ರಭಾವ

ಕುವೆಂಪು ಕನ್ನಡ ಕಂಡ ಶ್ರೇಷ್ಠ ದಾರ್ಶನಿಕ ಸಾಹಿತಿ. ಇವರ ಸಾಹಿತ್ಯ ಹಲವಾರು ಆಯಾಮಗಳು ಹಿನ್ನೆಲೆಗಳಿಂದ ಅಧ್ಯಯನಕ್ಕೆ ಒಳಪಟ್ಟಿದೆ. ಹೀಗೆ ಅವರ ಸಾಹಿತ್ಯ ರಚನೆಯಲ್ಲಿ ಪ್ರಭಾವ ಬೀರಿರುವ ಪ್ರಮುಖವಾದ ವಸ್ತು ಯಾವುದು ಎಂದು ಗಮನಿಸಿದಾಗ, ಮಲೆನಾಡಿನ ಪ್ರಕೃತಿ ಹಾಗೂ ಅವರ ಬಾಲ್ಯದ ಜೀವನದ ನೆನಪುಗಳು ಅದರಲ್ಲಿ ಸಿಂಹಪಾಲನ್ನು ಪಡೆಯುತ್ತದೆ. ಈ ಮಟ್ಟದಲ್ಲಿ ಪ್ರಕೃತಿ ಅವರ ಸಾಹಿತ್ಯ ರಚನೆಯನ್ನು ಪ್ರಭಾವಿಸಲು ಕಾರಣ ನೋಡಬೇಕಾಗುತ್ತದೆ. ಕುವೆಂಪು ತನ್ನ ಬಾಲ್ಯಕಾಲದಲ್ಲಿಯೇ ತಾಯಿಯನ್ನು ಕಳೆದುಕೊಂಡರು. ಆ ನಂತರ ಅದರೆಲ್ಲಾ ನೋವು ನಲಿವುಗಳಿಗೆ ತಾಯಿಯಂತೆ ಹಾರೈಕೆ ಮಾಡಿ ಪೋಷಿಸಿದ್ದು ಪ್ರಕೃತಿಯೇ ತಾಯಿಯನ್ನು ಕಳೆದುಕೊಂಡ ನಂತರ ಮಲೆನಾಡನ್ನು ತಾಯಿಯಾಗಿ ಬಂದಳು. ಮಲೆನಾಡಿನಿಮದ ದೂರಾಗಿ ಮೈಸೂರಿಗೆ ಬಂದಾಗ ಮಲೆನಾಡಿನ ಪ್ರಕೃತಿಯ ರೂಪಿನಂತಿದ್ದ ಹೇಮವತಿ ತಾಯಿಯಾದಳು ಶ್ರೀ ಕುವೆಂಪುಗೆ ಒಂದು ನಿದರ್ಶನವಾಗಿ

"ಮಲೆನಾಡನ್ನು ಮಡಿಲಿನಲಿ
ಕಾರ್ಮುಗಿಲೊಡಲಿನಲಿ
ಮನೆಮಾಡಿರುವೆನು ಸಿಡಿಲಿನಲಿ
ಮಿಂಚಿನ ಕಡಲಿನಲಿ
ಬನಗಳ ಬೀಡು
ಚೆಲ್ವದ ನಾಡು

ಮೋಹನ ಭೀಷಣೆ ಮಲೆನಾಡು" ಕವಿಗೆ ಮಲೆನಾಡಿನ ಪ್ರಕೃತಿಕ ಪರಿಸರ "ಅಮ್ಮನ ಮಡಿಲು" ತಾಯಿಯ ಮೊದಲ ಗುರುವಾಗಿರುವಂತೆ, ಕುವೆಂಪು ಬಾಲ್ಯದ ಬಹುಕಾಲದ ತಾಯಿಯಾದ ಮಲೆನಾಡು ಅದರ ಸಾಹಿತ್ಯ ರಚನೆಗೆ ಪ್ರೇರಣೆಯಾಗಿದ್ದರಲ್ಲಿ ಆಶ್ಚರ್ಯವೇನಿಲ್ಲ. ಕವಿಗೆ ಮಲೆಯ ನಾಡು ಕೇವಲ ಮೋಹನ ಮಾತ್ರವಲ್ಲ. ಅದು ಭೀಷಣವೂ ಕೂಡ. "ಕರ್ಗಾಲದ ಕಗ್ಗತ್ತಲು" ಎಂತವರಿಗೂ ಕೂಡ ಎದೆಝಲ್ಲೆನಿಸುತ್ತದೆ. ಆದರೂ ಸಹಕವಿಗೆ ಅದು ಕಾವ್ಯದ ಭಾಗವಾಗುತ್ತದೆ. ಏಕೆಂದರೆ ನಾನಿರುವುದು ಎನ್ನ ತಾಯಿಯಾದೆ

ಸಹ್ಯಾದ್ರಿಯ ಮಡಿಲಿನಲಿ ಎಂಬ ಕವಿ ಭಾವವೇ ಕುವೆಂಪುರವರು ಪ್ರಕೃತಿಯನ್ನು ಕಂಡ ರೀತಿಗೆ ನಿದರ್ಶನವಾಗಿ ನಿಲ್ಲುತ್ತದೆ.

ಅಮ್ಮನ ಮಡಿಲೊಳು ಮಲಗಿರುವೆನು
ಗುಮ್ಮನ ಭಯವಿಹುದೇನಣ್ಣ
ಅಮೃತ ಹೊಳೆಯೊಳು ತೇಲುವ ನನಗೆ
ಮೃತ್ಯದ ಭಯವಿಹುದೇನಣ್ಣಾ?

ಕುವೆಂಪು ಸದಾ ಕಾಲ ಮೈಸೂರಿನಲ್ಲಿದ್ದಾಗಲೂ ಅವರ ಮನಸ್ಸು ಮಲೆನಾಡ ಕುಪ್ಪಳ್ಳಿಯ ಸಹ್ಯಾದ್ರಿಯ ಸನ್ನಿದ್ಯಾಕ್ಕೆ ಹಂಬಲಿಸುತ್ತಿತ್ತು. ಅವರಿಗೆ ಮೈಸೂರು ಕಾರ್ಯಕ್ಷೇತ್ರ ಮಲೆನಾಡು ಜನ್ಮಭೂಮಿ "ಜನನೀ ಜನ್ಮಭೂಮಿಚ್ಚೆ ಸರ್ಂಗರ್ದಪಿ ಗಲಿಯಶ್ಚಿ" ಎಂಬ ಮಾತಿನಂತೆ ಕವಿಗೆ ಮಲೆನಾಡು ಸ್ವರ್ಗಕ್ಕಿಂತಲೂ ಶ್ರೇಷ್ಠ. ತಮ್ಮ ಊರಿನ ಹಾಗೂ ತನ್ನ ಪರಿಸರದ ಸಾನಿದ್ಯಕ್ಕೆ ಹಂಬಲಿಸಿದಾಗ ದೊರೆತ ಕಾಣ್ಕೆಯ ಫಲವೇ ಈ ಕವಿತೆ.

ಹೋಗುವೆನು ನಾ ಹೋಗುವೆನು ನಾ
ನನ್ನ ಒಲುಮೆಯ ಗೂಡಿಗೆ
ನನ್ನಯ ಮಲೆನಾಡಿಗೆ......... ಎನ್ನುತ್ತಾರೆ. ಬಯಲು ಬೇಸರವಾದಾಗ ರವಿ ಮನಸ್ಸಿಗೆ ಅಪ್ಪಯಮಾನವಾಗಿ ಕಾಣಿಸುವುದು ಮಲೆನಾಡು ಪ್ರತಿಯೊಬ್ಬರಿಗೂ ತನ್ನ ಊರಿಗೆ ನೆನಪು ಒಂದಲ್ಲಾ ಒಂದು ರೀತಿಯಾಗಿ ಜೀವನದುದ್ದಕ್ಕೂ ಕಾಡುತ್ತದೆ. ಆ ಕಾಡುವಿಕೆಗೆ ಕಾರಣ ಬಾಲ್ಯದ ಆ ಸುಂದರ ನೆನಪುಗಳ ಕನಸು ನಮ್ಮ ಸ್ಮೃತಿಪಟಲದಲ್ಲಿ ಸದಾ ಕಾಲ ಹಸಿರಾಗಿರುತ್ತದೆ. ಹಾಗೆಯೇ ಕವಿಗೂ ನಮ್ಮೂರು ಕುಪ್ಪಳ್ಳಿ ಎಂದರೆ ಅದು ಮಲೆನಾಡಿನ ಪ್ರಕೃತಿಯ ಕಿರೀಟ ಅದನು ನೋಡುವ ಕಣ್ಣುಗಳಿಗೆ ಆನಂದ ಆತ್ಮಕ್ಕೆ ಅದು ಒಸಗೆ ಇನ್ನು ಕವಿಯ ಮನೆ ಹಾಗು ಮನೆಯ ಪರಿಸರ ಕುವೆಂಪುಗೆ ಹೊಸ ಚೈತನ್ಯವನ್ನು ಮೂಡಿಸಿದ ಪರಿಸರ ಕುವೆಂಪು ಮನೆಯ ಒಂದೊಂದು ಮಾತಿಗೂ ಶತಮಾನದಷ್ಟು ಇತಿಹಾಸವಿದೆ. "ಮಲೆನಾಡಿನ ಚಿತ್ರಗಳು" ಸಂಪೂರ್ಣ ರಚನೆಗೆ ಮೂಲ ಪ್ರೇರಣೆಯೇ ಈ ಮನೆಯ ನೆನಪುಗಳ ರಾಮಾಯಣ, ಮಹಾಭಾರತಗಳ ಅರಿವುಗಳನ್ನು ಅರಿತು ಮುಂದೊಂದುದಿನ ರಾಮಾಯಣ ದರ್ಶನದಿಂದ ಮೂಡಲಿರುವ ಮಹಾಕವಿಗೆ ಅರಿವನಿತ್ತ ಮಹಾಮನೆ, ಅದಕ್ಕಾಗಿಯೇ ಕವಿ

ನಿನ್ನ ಮನೆ

ಮನೇ ಮನೇ ಮುದ್ದು ಮನೆ

ನನ್ನ ತಾಯಿಯೊಲಿದ ಮನೆ...... ಎನ್ನುತ್ತಾರೆ

"ಕುವೆಂಪು ಪ್ರಥಮತಃ ದಾರ್ಶನಿಕರು ಅನಂತರ ಕವಿಗಳು ನಿಸರ್ಗದಿಂದ ನಡುವೆ ನಿಸರ್ಗವಾಗಿ ಹುಟ್ಟಿ ನಿಸರ್ಗವಾಗಿ ಬೆಳದವರಿಗೆ ನಿಸರ್ಗದ ಒಳಗುಟ್ಟೆಲ್ಲ ರಟ್ಟೆ". (ಕುವೆಂಪು, ಸಾಹಿತ್ಯದಲ್ಲಿ ನಿಸರ್ಗ, ಪು. 237) ಎಂದಿದ್ದಾರೆ. ಲೇಖಕರೋರ್ವರು ಈ ಮಾತಿನಂತೆ ಕುವೆಂಪುರವರಿಗೆ ಆ ರೀತಿಯ ಆಳ ಅಂದಿನ ವಿಸ್ತಾರವನ್ನು ಕಾಲ ಪ್ರಪಂಚವನ್ನು ನೋಡುವ ಸಕಲ ಕಲೆಯನ್ನು ಸಮನ್ವಯ ಪೂರ್ಣದೃಷ್ಟಿ ಚೇತನ ಪ್ರಜ್ಞೆಯನ್ನು ದಯಪಾಲಿಸಿದ್ದು ಮಲೆನಾಡಿನ ರುದ್ರ ರಮಣೀಯ ಪರಿಸರವೆಂದರೆ ತಪ್ಪಾಗಲಾರದು.

ನಾವು ಪ್ರತಿದಿನ ಒಂದಲ್ಲೊಂದು ಪ್ರಕೃತಿಯ ವಿದ್ಯಾಮಾನಗಳನ್ನು ನೊಡುತ್ತಲಿರುತ್ತವೆ. ಸೂರ್ಯೋದಯ, ಚಂದ್ರೋದಯ, ಹಕ್ಕಿಸಾಲು, ಬೆಳಗುಬೈಗು, ಹೂರಾಗಿ ಹೀಗೆ ಒಂದಿಲ್ಲೊಂದು ಪ್ರಾಕೃತಿಕ ಸಾಮರ್ಥ್ಯಕ್ಕೆ ನಾವು ಸಾಕ್ಷಿಯಾಗುತ್ತೇವೆ. ಆದರೆ ಅದು ನಮಗೆ ಹಾಗೆ ಬಂದು ಹೀಗೆ ಹೋಗುವ ಒಂದು ಸನ್ನಿವೇಷ ಮಾತ್ರವೇ ಆಗುತ್ತದೆ. ಕವಿಯ ಚೇತನ ದೃಷ್ಟಿಗೆ ಅದು ಮಾತ್ರ ಚೇತನಮಯ ಚಿರಂತನವಾದುದು.

"ತೇಗೆ ಜಡವೆಂಬುದು

ಬರಿಸುಳ್ಳ

ಈ ಕಲ್ಲು" ಎನ್ನುತ್ತಾರೆ. "ಶಿವ ಮಂದಿರ ವನ ಸಮದುಂದರ ಎನ್ನುತ್ತಾರೆ. ಕುಂಕುಮದೇವಿಯಲ್ಲಿ ಬಕಳಿ ಮಾಡುವ ಪಾಲ್ಗುಣ ರವಿ ದರಶನಕ್ಕೆ ಕರೆಯುತ್ತಾರೆ. ಹೀಗೆ ಕರೆಯುವಾಗ ಪ್ರತಿ ದಿನದ ಸೂರ್ಯನೂ ಒಂದೋದು ರೀತಿಯಾಗಿ ಕಾಣಿಸುತ್ತಾನೆ. ಕವಿಯ ಜಗತ್ತು ಆನಂದದ ಪ್ರತೀಕ ಮಾನವ ಹೃದಯ ಪ್ರಕೃತಿಯ ವ್ಯಾಪಾರದಲ್ಲಿ ಮಗ್ನನಾದಾಗ ಹೃದಯ ಕ್ಷೇಶ ಮಾರಾಗಿ ಮನಸ್ಸು ಮುದಗೊಳ್ಳುತ್ತಾನೆ.

ಬಿಸಿಲು, ಗಾಳಿ, ಮಳೆ, ಚಳಿ, ಮಾಗಿ ಬೈಗುಗಳು ಕೋಗಿಲೆ ಕಾಜಾನ, ಕಾಮಳ್ಳಿಗಳು ಪ್ರಕೃತಿಯ ವ್ಯಾಪಾರದ ಪ್ರತಿಯೊಂದು ಅಂಶವೂ ಕವಿಗೆ "ಶಿವ ಸದನ" ಇಲ್ಲಿ ಶಿವ ಸದನ ಎಂದರೆ ಜೋಯಿಸರ

ಶಿವನಲ್ಲ ಆ ಅವನು "ಜಗದ ಜಲಗಾರ ಶಿವ" ನಿಮ್ಮೆಲ್ಲರ ಶಿವ ಅವನಿರುವುದು ಈ ಆನಂದದ ಪ್ರಕೃತಿಯ ನಡುವೆ ಅದಕ್ಕಾಗಿಯೇ ಕವಿ "ಶಿವನನ್ನು ಕಾವ್ಯದ ಕಣ್ಣು" ಎನ್ನುತ್ತಾರೆ.

ಸವಿ ವದನವೇ ಶಿವಸದನ ವೋಂ

ಬರಿ ಕಣ್ಣದು ಮಣ್ಣೊ

ಶಿವನಿಲ್ಲದ ಸೌಂದರ್ಯವೇ?

ಶಿವಮುಖದ ಕಣ್ಣೋ ! ಎನ್ನುತ್ತಾರೆ.

ದೇವರು ರುಜು ಮಾಡಿದನು ರಸವಶನಾಗುತಾ ಕವಿ ಅದ ನೋಡಿದನು. ಎನ್ನುತ್ತಾ ತಮ್ಮ ಸಾಹಿತ್ಯದ ಅನಂತದೊನ್ನಕ್ಕೂ ಮಲೆನಾಡಿನ ಪಕ್ಷಿ ಸಂಕುಲ, ಪ್ರಾಣಿ ಸಂಕುಲಗಳನ್ನು ಮರಗಿಡಗಳನ್ನು ಪರಿಚಯಿಸುತ್ತಾರೆ.

ಬಯಲು ಬೇಸರವಾಗೆ ಮನಸ್ಸು ಹಂಬಲಿಸಿದಾಗ ಕವಿಗೆ ಮತ್ತು ಮಲೆನಾಡು ಕಣ್ಣಿನ ಮುಂದೆ ಬಂದು ಪರವಶವಾಗುತ್ತಾರೆ. ಈ ಸನ್ನಿದ್ಯಾ ಶ್ರೇಷ್ಠ ಋಷಿ ಸಾದೃಶ್ಯ ಮಾತ್ರರಿಂದ ಸಾಧ್ಯ ಎಂಬುದು ನನ್ನ ಅನಿಸಿಕೆ ಅದಕ್ಕಾಗಿ ಕವಿ ಮಹಾಕವಿಯಾದದ್ದೆ ರಸ್ಯಋಷಿಯಾಗಿದ್ದು ಮಲೆನಾಡು ಕವಿಗೆ "ಪಕ್ಷಿಕಾಶಿ" ಹೇಗೆ ಒಂದು ಧರ್ಮೀಯರಿಗೆ ಕಾಶೀ ಪವಿತ್ರವೋ ಪರಕೃತಿಯ ಆರಾಧಿಸುವ ಧರ್ಮವಿಲ್ಲದವರಿಗೆ ಅನಿಕೇತನ ಪ್ರಜ್ಞೆಯುಳ್ಳವರಿಗೆ ಇದು ಕಾಶಿಗಿಂತಲೂ ಶ್ರೇಷ್ಠ ಪಕ್ಷಿಕಾಶಿಯಲ್ಲಿ ಪ್ರಕೃತಿಯ ದೇವರು. ಗಂಗೆಯ ಬದಲು ತುಂಗೆ ದುರ್ನಡತೆ ದುರಾಚಾರಗಳಿಗೆ ಇಲ್ಲಿ ಸ್ಥಳವಿಲ್ಲ.

ಇಲ್ಲಿ ಹುಗಲಿಲ್ಲ ನಿನಗೆ ಒಬಯದ

ಇದು ಪಕ್ಷಿ ಕಾಶಿ !

ದೇವಸವಿಯಲ್ಲಿ ದ್ವೀಪ ಕೃಪೆಯಲಿ

ಭಾವತರುವಾಗ

ಕೊಲ್ಯ ಬತ್ತಳಿಕೆ ಬಿಲ್ಲು ಬಾಣವನು

ಅಲ್ಲೆ ಇಟ್ಟು ಬಾ ಎನ್ನುತ್ತಾರೆ. ಕವಿಗೆ ಪ್ರಕೃತಿಯ ಜೀವಂತಿಕೆಯ ಪ್ರತೀಕ. ಅಲ್ಲಿ ಸೂತಕದ ಮಾಯೇ ನಿಷಿದ್ದ ಇಲ್ಲಿ. ಪ್ರಕೃತಿ ಪೂಜೆಯೇ ಆರಾಧನೆ, ಪ್ರಕೃತಿಯೇ ಧರ್ಮ ಸಕಲ ಮಂತ್ರವೂ ಪ್ರಕೃತಿ ಪೂರ್ಣವೂ

ಪ್ರಕೃತಿಮಯವೇ ಆಗಿದೆ. ಇಲ್ಲಿ ಒಂದು ಹೂವಿಗೆ ನೋವಾದರೂ ಕವಿ ಸಹಿಸುವುದಿಲ್ಲ. ಅದು ಮಾನವರಿಂದಾಗಲಿ ದೇವರು ಹೆಸರಿನಿಂದಾಗಲಿ ಪ್ರಕೃತಿಯ ಒಂದಂಶಕ್ಕೂ ಹಾನಿಯಾಗಬಾರದು ಅದಕ್ಕಾಗಿಯೇ

ಓ ಪೂಜಾರಿ..............

ಕೋಮಲ ಸುಮಗಳ ಕತ್ತನು ಕೊಯ್ದು

ಕಣ್ಗಲ್ಲಿನ ಕಗ್ಗತ್ತಲೆಗೈದು ಗುಡಿಯ

ದೇವರಿಗೆ ಬಲಿಕೊಡದಿದ್ದರೆ

ಪರಮಾತ್ಮನಿಗೆ ಕ್ರಾಂತಿಯೇ ಇಲ್ಲೇನೋ ಎನ್ನುತ್ತಾರೆ.

ಕುವೆಂಪು ರವರ ವ್ಯಕ್ತಿತ್ವ ಕವಿಮನ ತಾನು ಉರಿದೇಳುತ್ತದೆ. ಸೌಂದರ್ಯ ಸಮಾಧಿಯ ಆನಂದವನ್ನು ಹೀರಿ ಮೈಮರೆಯುತ್ತದೆ. ಕವಿ ಭಾವ ಜ್ವಾಲೆಯಾಗುತ್ತದೆ. ಕವಿಮನ ಪ್ರತಿಯೊಂದನ್ನು ಭಾವ ಸ್ಫೂರ್ತಿಯಾಗಿ ನೋಡಿ ಆನಂದಿಸುತ್ತಿದೆ. ಅದು ಹೇಗೆಂದರೆ.

"ತೆರೆತೆರೆಯಾಗಿಹ ನೊರೆನೊರೆ ಕಡಲನೆ ನೋಡುವ ಕಗ್ಗೋಡುವವರೆಗೆ ಬನಸಿರಿ ತುಂಬಿದ ಕಣಿವೆಯ ಹಂದಿರೆ ಧೂಳೀ ಸಮಯ ಬಾನ್‌ಕಡೆಗೆ ಪ್ರತಿಭೆಯ ಹೋಮಾಗ್ನೀಯ ತಾನುರಿದುದೋಳ್ ದುರಗಿಡದಲ ಜಲದೊಡಲಲಿ ಇದೆಕೋಸ್ವಾಂದಿ ಸುತಿದೆ ಭಾವಜ್ವಾಲೆ"

ಹೀಗೆ ತಮ್ಮದೇ ಆದ ಕಾಣ್ಕೆ ಮುಖಾಂತರ ರಸೃಷಿಯ ಸೌಂದರ್ಯ ಸಮಾದಿಯ ಗುಟ್ಟು ರಟ್ಟಾಗುತ್ತದೆ. ಪ್ರಕೃತಿಯೊಂದಿಗಿನ ಈ ಮಟ್ಟ ಗಿನ ಒಡನಾಟ ಬಹುಶಃ ಕನ್ನಡ ಮತ್ತಾವ ಕವಿಗೂ ಸಾಧ್ಯವಾಗಿಲ್ಲ ಎನ್ನುವಷ್ಟರ ಮಟ್ಟಿಗೆ ಕುವೆಂಪುರವರ ಸಾಹಿತ್ಯವನ್ನು ಪ್ರಕೃತಿ ಪ್ರಭಾವಿಸಿದೆ. ಎಂದರೆ ಅತಿಶಯೋಕ್ತಿಯಾಗಲಾರದು.

ಪ್ರಕೃತಿ ಕುವೆಂಪುಗೆ ಕೇವಲ ತಾಯಿಯಾಗಿ ಮಾತ್ರವಲ್ಲದೆ ಮನದಾಗ್ನೆಯಾಗಿ ತೊಡ ಒಲಿದವಳು ಇದನ್ನು ಇವರ ಸಾಲುಗಳಲ್ಲಿಯ ನೊಡುವುದಾದರೆ

"ಮಲೆಯ ನಾಡೆನೆಗೆ ತಾಯಿಮನೆ

ಕಾಡು ದೇವರ ಬೀಡು ಗಿರಿಯ ಮುಡಿ

ಶಿವನಗುಡಿ ಬನವಗ್ಗೆ ಮೊದಲಿನಾಮನದೆನ್ನೆ" ಎನ್ನುತ್ತಾರೆ.

ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿ ಇವು ತಮ್ಮ ಕವಿತೆಯ ಮೂರು ಕಣ್ಣುಗಳೆಂದು ಕವಿ ಹೇಳಿದ್ದಾರೆ. ಬಹುಶಃ ಈ ಮೂರು ದೃಷ್ಟಿಗಳು ಕವಿಗೆ ಪ್ರಕೃತಿ ವ್ಯಾಪಾರದಿಂದ ಒದಗಿಬಂದ ಕಾಣ್ಕೆಗಳು ಎಂದು ನನಗನಿಸುತ್ತದೆ. ಇವರ ಜೀವನ ನಿಷ್ಟೆ ಬದುಕಿನ ಒರೆಗಿನ ಬದ್ಧತೆಯೇ ಅವರ ಕಾವ್ಯದ ಮೇಲ್ಮುಖ ಚಲನೆಗೆ ಕಾರಣವಾಗಿದೆ. ತನಗೆ ಒಲಿದಾ ಪ್ರಕೃತಿಯ ಸವಿ ಎಲ್ಲರಿಗೂ ದೊರಕಬೇಕೆಂಬುದು ಅದರ ಬಯಕೆ ಹಾಗೂ ಪ್ರಾಶ್ನೆ.

"ನನಗೆ ಆ ವರವಿತ್ತ...... ಪ್ರಕೃತಿ ಮಾತೆ

ನನ್ನ ಕನ್ನಡ ಬಂಧುಗಳ ಮನಕದನ ನೀಡು

ಪಲ್ಲವಿಯಂತೆ ಕಲೆಯಲ್ಲಿರಲಿ ಕೃಪೆಮಾಡು"

ಬಾಲಕನೋರ್ವ ನಿಸರ್ಗವನ್ನು ನೋಡುವ ಕ್ರಮದಿಂದ ಆರಂಭವಾಗಿ ಮಹಾವಿಯೋರ್ವ ನಿಸರ್ಗವನ್ನು ಆಸ್ವಾದಿಸುವ ಕ್ರಮಗಳೆರಡರಲ್ಲೂ ಸಹ ಕವಿಯ ಶಾಗ್ನೆಯ ಫಲ ಹಿರಿಯ ಹೂವನ್ನು ನೊಡಿ ಹಾಡುವ ಕವಿ ಅದನೋಡಿದನು ಎನ್ನುತ್ತಾರೆ. ಅವನನ್ನು ಬಾಲ್ಯದಲ್ಲಿ ಹೇಗೆ ಕಾವ್ಯ ಕನ್ನನಿಕೆ ಒಂದು ಬರ ಸೆಳೆದಳು ಎಂಬುದನ್ನು ಗಮನಿಸಬಹುದು.

"ಮಲೆನಾಡ ಬನಗಳಲಿ ಮುಗುದ ಬಾಲ ನಲಿಯುತಿರಲು ಅಲಿಯದಂತೆ ಹೆಜ್ಜೆಯಿಟ್ಟು ಚಿನ್ನ ಹಾಗೆ ಬಂದೆ ಕಖ್ಖದಂಗನೆ" ಹೀಗೆ ಅರಿಯದಂತೆ ಒಂದು ಹಿಡಿದು ಎತ್ತಿದ ಆ ಪುಟ್ಟ ಕವಿ ಇಂದು ದಾಸ್ಸಿಕ ಕವಿ, ಜಗದ ಕವಿ, ಯುಗದ ಕವಿ, ರಸಖುಷಿ, ಮಹಾಕವಿಯಾಗಿ, ವಿಶ್ವಮಾನ್ಯರಾಗಲು ಮೂಲ ಕಾರಣ ಪ್ರಕೃತಿ. ಆಕೆ ಕುವೆಂಪುಗೆ ಎಲ್ಲವು ಆಗಿ ಸಲಹಿದ ಒಂದು ಪವಾಡವೆಂಬಂತಿದೆ.

ಹೀಗೆ ಕವಿಕಾನ್ಯದ ಉದ್ದಕ್ಕೂ ಜೀವನದಿಯಂತೆ ಪ್ರವಹಿಸಿದ ತುಂಗೆ, ಉಸಿರಲ್ಲಿ ಉಸಿರಾದ ಕವಿಶೈಲ, ನರನಾಡಿಗಳಂತೆ ಸಿಬ್ಬುಲುಗುಡ್ಡ, ಗಿರಿ ಗಹ್ವಾರಗಳು, ಪಂಚೇದ್ರಿಯಗಳಂತಹ ಪ್ರಾಣಿ, ವೃಕ್ಷ, ಸಂಕುಲಗಳು, ತರುಲತೆ, ವನಗಳು, ಮಲೆನಾಡಿನ ಚಿತ್ರಗಳು ಕವಿ ವಿಶ್ವ ಮಾನ್ಯವಾಗುವಲ್ಲಿ ತಮ್ಮ ಪಾಲು ಸಲ್ಲಿಸಿವೆ.

ಮಲೆನಾಡಿನ ಪ್ರಕೃತಿಯ ವರ್ಣನೆಯಲ್ಲಿವಿದ್ದರೆ ಅವರ ಎರಡು ಕಾದಂಬರಿಗಳು, ಮಹಾಕಾವ್ಯ, ನಾಟಕಗಳು ಸಹ ಪೂರ್ಣದೃಷ್ಟಿ ನಡೆಯುತ್ತಿರಲಿಲ್ಲ ಎಂಬುದು ನಗ್ನ ಅಭಿಮತವಾಗಿದೆ. ಹೀಗಾಗಿ ತಮ್ಮ ಸಾಹಿತ್ಯದುದ್ದಕ್ಕೂ ಪ್ರತಿ ಪಾತ್ರಗಳು ಪ್ರಕೃತಿಯ ಒಡಲಿನಲ್ಲಿ ಲೀನವಾಗುವಂತೆ ಚಿತ್ರಿಸಿ ತನ್ಮೂಲಕ ತಾನೆ

ಪ್ರಕೃತಿಯಂತಾಗಿ ಮಲೆನಾಡಮ್ಮನ ಒಳಗುಟ್ಟನೆಲ್ಲಾ ನಾಡಿಗೆ ವಿದ್ವತ್ ವಲಯಕ್ಕೆ ಎಡಬಡಿಸಿದ ಮಹಾಕವಿಗೆ ಪ್ರಕೃತಿಯೋ ಸರ್ವಸ್ವವೂ ಆಗಿದೆ. ಈ ಮಾತಿಗೆ ಎಂಬುಕೊಡುವಂತೆ ನಾಡೋಜ ಡಾ. ಎಚ್.ಎಲ್. ನಾಗೇಗೌಡರು ತಮ್ಮ ಮಲೆನಾಡ ವಾಲ್ಮೀಕಿ ಕೃತಿಯಲ್ಲಿ ಹೀಗೆ ಹೇಳಿದ್ದಾರೆ. "ಶ್ರೀ ಕುವೆಂಪು ಸೃಜಿಸಿದ ಮಹಾ ಛಂದಸ್ಸಿನ ಮೇರು ಕೃತಿ ಮೇಣ್ ಜಗದ್ಭವ್ಯ ರಾಮಾಯಣ" ಎಂದರು ಪುಟ್ಟಪ್ಪನವರು ನಿಜ ಆದರೆ ಆ ರಾಮಾಯಣ ಮೇರು ಕೃತಿಯೂ ಜಗದ್ಭವ್ಯವೂ ಆದದ್ದೂ ಸಹ್ಯಾದ್ರಿಯ ಆ ಕಾಡಿನಿಂದಾಗಿ ಕಾಡು ಒದಗಿಸಿಕೊಟ್ಟ ಉಪಮೆ, ವಾಹೋಪಮ ಮತ್ತು ಪ್ರತಿಮೆಗಳಿಂದಾಗಿ ರಾಮಾಯಣ ದರ್ಶನಂ ಕುವೆಂಪುನನ್ನು ಸೃಜಿಸುವುದಕ್ಕೆ ಮುಂಚೆ ಕಾಡು ಪುಟ್ಟಪ್ಪನವರನ್ನು ಸೃಜಿಸಿತ್ತು. ಪುಟ್ಟಪ್ಪ ಕಾಡಿನಲ್ಲಿ ಹುಟ್ಟಿ ಆಕಾಡಿನ ದರ್ಶನ ಕಾವ್ಯದ ಸೃಷ್ಟಿಯೂ ಆಗುತ್ತಿರಲಿಲ್ಲ ಎಂದರೆ ಅತಿಶಯೋಕ್ತಿಯಾಗಲಾರದೆಂದು ನಮ್ಮ ಭಾವನೆ" ಎಂದಿದ್ದಾರೆ.

ಮಲೆನಾಡು ಅವರಿಗೆ ಬೆಟ್ಟ ಗುಡ್ಡ ಕಾಡು ಮರಗಿಡ ಮೃಗ ಪಕ್ಷಿಗಳ ದೈವ ಸೃಷ್ಟಿಯ ಭೂಭಾಗವಾಗಿರಲಿಲ್ಲ. ಅದು ಅವರಿಗೆ ಹೆತ್ತ ತಾಯಿಯ ಮನೆ ಹೇಗೋ ಹಾಗೆ ಪ್ರಕೃತಿ ತಾಯಿಯ ಮನೆಯೂ ಆಗಿತ್ತು. ಕಾಡು ಅವರಿಗೆ ದೇವರ ಬೀಡು ಗಿರಿಯಮುಡಿ ಶಿವನ ಗುಡಿ ಬಸವಣ್ಣು; ಮೊದಲಿಗೆ ಮನದನ್ನ ಹೀಗೆ ತಾಯಿ, ದೇವರು ಗುಡಿ ಬಸವಣ್ಣು, ಮೊದಲಿನ ಮನವನ್ನೆ ಇವರನ್ನೆಲ್ಲಾ ಬಿಟ್ಟು ಕುವೆಂಪು ಸಾಹಿತ್ಯ ರಚಿಸಿದರೆಂದರೆ ಬಹುಶಃ ಅದು ಸಮರ್ಥನೀಯವೂ ಆರಲಾರದು. ಇವರ ಕಾವ್ಯದಲ್ಲಿ ಪ್ರಕೃತಿಯ ಸಮಸ್ತವೂ ಸ್ಥನ ಪಡೆದಿದೆ. "ಯಾರ ತನು ಸೃಷ್ಟಿಯ ಸೌಂದರ್ಯದಿಂದ ಮೋಹಿತವಾನಿ ಮೈಮರೆತು ಅದರಲ್ಲಿ ತಲ್ಲೀನವಾಗಿ ಈ ರಹಸ್ಯ ಲೋಕದ ಸಂದೇಶಗಳನ್ನು ಹೊರಗೆಡಸಲು ಶಕ್ತನಾಗುವನೋ ಆತನೇ ಕವಿ" ಎಂದು ಶ್ರೀ ಕುವೆಂಪು ಅವರೆ ಹೇಳಿದ್ದಾರೆ. ಅವರ ಕಾವ್ಯ ಸರ್ವವೂ ಸಮಸ್ತವೂ ಆದ ಪ್ರಕೃತಿ.

ಅವರೆ ಒಡಲನ್ನು ಅಮೃತದ ದಿವ್ಯ ಪಾತ್ರೆಯಾಗಿ ಓದುಗನ ಮುಂದುವರಿಸಿದ್ದಾರೆ. ಕುವೆಂಪು ಹೀಗೆ ನೋಡಿದ ಪರಿ ಮತ್ತಾವ ಕವಿಗೂ ಸಾದ್ಯವಾಗಲಾರದೆನೋ ಎಂಬಂತೆ ಪ್ರಕೃತಿಯಲ್ಲಿ ಪ್ರಕೃತಿಯಾಗಿಯೇ ಬೆಳೆದು ಪ್ರಕೃತಿಯನ್ನು ಜೀವವರಭಾಗ ಮಾಡಿಕೊಂಡವರಿಗೆ ಪರಕೃತಿಯ ಬಳಿ ಗುಟ್ಟೆಲ್ಲ ರಟ್ಟೆ ಎನ್ನಬಹುದು.

## ಕುವೆಂಪು ಹಾಗೂ ವರ್ಡ್ಸ್‌ವರ್ತ್ ಕೃತಿಗಳಲ್ಲಿನ ಸಾಮ್ಯತೆ :

ಕುವೆಂಪು ಅವರು ಮಲೆನಾಡಿನಲ್ಲಿ ವ್ಯಾಸಂಗ ಮುಗಿಸಿ ಅವರು ಹೈಸ್ಕೂಲಿಗೆ ಸೇರಿದರು ಅವರ ವಯಸ್ಸು 14ವರ್ಷ ಆಗಿತ್ತು. ಮುಂಚೆ ತಮ್ಮ ನಾಡಿನಲ್ಲಿ ಅವರು ಬೆಳೆದುಬಂದಂತಹ ಬೆಟ್ಟ, ಬಯಲು, ಗಿರಿ, ವನ ಅಷ್ಟೇ ಎಂಬ ಅಂಶಗಳಿದ್ದವು ಅವರು ಹೆಚ್ಚಾಗಿ ಇಂಗ್ಲಿಷಿನ ಮೋಹ ಮರೆಯಾಗಿತ್ತು. ಮೊಟ್ಟ ಮೊದಲಬಾರಿಗೆ 1922ರಲ್ಲಿ "The Beginners muse" ಎಂಬ ಸಂಕಲನ ಪ್ರಕಟಿಸಲಾಯಿತು ಹೆಚ್ಚಿನ ಒಲವು ಇಂಗ್ಲೀಷಿನಲ್ಲಿ ಬರೆಯಲು ಮುಂದದರು. ಅನೇಕ ಕವಿಗಳು ಪ್ರಭಾವಕ್ಕೆ ಒಳಗಾಗಿ ಇಂಗ್ಲಿಷಿನಲ್ಲಿ ಬರೆಯ ತೊಡಗಿದರು.

ಕುವೆಂಪು ಅವರು ಪಶ್ಚಿಮದ ರೊಮೆಂಟಿಕ್ ಕವಿಗಳ ಕಾವ್ಯಗಳನ್ನು ಅಭ್ಯಾಸತೊಡಗಿದರು. ಅದರಲ್ಲಿ ಮುಖ್ಯವಾಗಿ ಸ್ಪೂರ್ತಿದಾಯಕರಾದಂತಹ ಆರಾದ್ಯ ಕವಿಎಂದ ಹೇಳಬಹುದು. ಕುವೆಂಪು ವರ್ಡ್ಸ್‌ವರ್ತ್ ಕವಿಯ ಕವನದಲ್ಲಿ ಆಸಕ್ತಿದಾಯಕ ವಸ್ತು. ವಿಷಯವನ್ನು ಅಭ್ಯಾದಲ್ಲಿ ತೊಡಗಿದರು.

ಕುವೆಂಪುರವರ ಮೆಚ್ಚಿನ ಕವಿಯನ್ನು "ಕಾವ್ಯರ್ಷಿ" ಎಂದು ಕರೆಯುತ್ತಾರೆ. ಏಕೆಂದರೆ ಆಂಗ್ಲಕವಿಗಳಲ್ಲಿ ಹೆಚ್ಚಿನ ಒಲವು ಮೂಡಿಸಿದವರಲ್ಲಿ ವರ್ಡ್ಸ್‌ವರ್ತ್ ಎಂದೆ ಹೇಳುತ್ತಾರೆ.

ವರ್ಡ್‌ವರ್ತ್‌ರವರು ತಮ್ಮ ಭಾವಗೀತೆಯನ್ನು ಸಾಮಾನ್ಯ ಜೀವನದ ಸಾದರಣ ವಿಷಯಗಳನ್ನೇ ಆರಿಸಿಕೊಂಡು ಪ್ರಧಾನವಾಗಿ ಸೃಷ್ಟಿಸಿದ್ದಾರೆ.

"The visirary power 'silence' 'solitude'

'Immorality', 'infinite', 'Eternal', Sublimity ತನ್ನ ಅಪರೋಕ್ಷ ಭೂಮಾನುಭೂತಿಯಿಂದಲೆ ಭವ್ಯತೆಯನ್ನು ಸೃಷ್ಟಿಸಿದ್ದಾನೆ. ಎಂದು ತಮ್ಮ ಪೂರ್ಣಪವಗಳಲ್ಲಿ ವ್ಯಕ್ತಪಡಿಸುತ್ತಾರೆ. ಆದರೆ ಕುವೆಂಪುರವರು

ಆನಂದಮಯ ಈ ಜಗ ಹೃದಯ

ಏತಕೆ ಭಯ? ಮಾಣೊ

ಸೂರ್ಯೋದಯ ಚಂದ್ರೋದಯ

ದೇವರದಯೆ ಕಾಣೊ

ಕುವೆಂಪು ಮೊದಲು ಕಥನ ಕವನಗಳನ್ನು ಬರೆಯುತ್ತಿದ್ದರು ನಂತರ ಸಮಾಜದ ಗೀತೆಗಳನ್ನು ಬರೆಯಲು ಮುಂದದರು. (ಪ್ರಭುಶಂಕರ, ಕೃತಿಶೀಲ, 404)

ವರ್ಡ್ಸ್‌ವರ್ತ್ ಮತ್ತು ಕುವೆಂಪು ಕಾವ್ಯಗಳಲ್ಲಿ ತಮ್ಮ ಬರವಣಿಗೆ ಶೈಲಿಯೂ ತುಂಬಾ ಸೊಗಸಾಗಿದೆ. ಏಕೆಂದರೆ ಕುವೆಂಪುರವರು ಬರೆದಿರುವ ಕವನ ಸಂಕಲನಗಳನ್ನು ಕೆಲವು ರೀತಿಯಲ್ಲಿ ಅರ್ಥಮಾಡಿಕೊಳ್ಳಬಹುದು. ಆದರೆ ವರ್ಡ್ಸ್‌ವರ್ತ್ ರವರ ಕಾವ್ಯಗಳು ತುಂಬಾ ಕಷ್ಟಕರ ವಾಗುತ್ತದೆ.

ವರ್ಡ್ಸ್‌ವರ್ತ್‌ರವರ "ಪ್ರಕೃತಿಯ ವಿವಿಧ ಸುಂದರ ದೃಶ್ಯಗಳು ಕವಿಯ ಕಣ್ಣಿಗೆ ಕುರುಡುನ ಎಂತೋ ಅಂತೆ ಅಲ್ಲ. ದೂರದಲ್ಲಿ ಏಕಾಂತವಾಗಿ ಕೊಠಡಿಯಲ್ಲಿ ಕುಳಿತಾಗಲೋ, ನಗರದ ಗಲಿಬಿಲಿಯ ನಡುವೆ ನಿಂತಾಗಲೊ, ಮನವು ತೀರ ಬಳಲಿದಾಗಲೋ, ಈ ದೃಶ್ಯಗಳು ದಾನಮಂಡಿದ ಮಧುರಾನುಭಾವಗಳು ಮತ್ತೆ ತೇಲಿಬರುತ್ತವೆ. ತನ್ನ ನೆತ್ತಿಯಲ್ಲಿ ಈ ಅನುಭವಗಳು ಹರಿಯುವುದನ್ನು ಹೃದಯದಲ್ಲಿ ಅವು ಮನೆ ಮಾಡಿರುವುದನ್ನು ತನ್ನ ಶುದ್ಧ ಚೇತನದ ಆಳಕ್ಕೆ ಅವು ಅವತರಿಸುವುದನ್ನು ಅಪೂರ್ವವಾದ ಶಾಂತಿಯನ್ನು ಅವು ತಂದೀಯುವುದನ್ನು ಅವನು ಅನುಭವಿಸುತ್ತಾನೆ. (ಬೆ.ಗೂ. ರಮೇಶ್, ರಾಷ್ಟಕವಿ ಕುವೆಂಪು, ಪು. 24)

ಇಲ್ಲಿ ಓದುಗರಲ್ಲಿ ಎಂತಹ ಅರ್ಥಪೂರ್ಣವಾಕ್ಯಗಳು ಎಷ್ಟರ ಮಟ್ಟಿಗೆ ಅರ್ಥವಾಗುತ್ತದೆಯೆಂದು ತಿಳಿಯಬೇಕಾಗುತ್ತದೆ.

ಕವಿಯೂ ಒಬ್ಬ ಮನುಷ್ಯನು ಯಾವ ರೀತಿಯಲ್ಲಿ ತನ್ನ ಅನುಭವಗಳು  ಕಣ್ಣ ಮುಂದೆ ಬಂದಾಗ ಆಗುವಂತಹ ದೃಶ್ಯವಳಿಯನ್ನು ಕವಿಯೂ ಅರ್ಥಪೂರ್ಣವಾಗಿ ಚಿತ್ರಿಸುತ್ತಾ ಹೋಗುತ್ತಾನೆ. ಪಾಶ್ಚಾತ್ಯ ಕವಿಯಾದ ವರ್ಡ್ಸ್‌ವರ್ತ್‌ರವರು ತಮ್ಮ ಕಾವ್ಯಗಳಲ್ಲಿ ತಾನು ಅನುಭವಿಸಿದ ಸ್ಥಿತಿಗತಿಗಳನ್ನು ಕೆಲವು ಕಾವ್ಯಗಳ ಮೂಲಕ ಚಿತ್ರಿಸುತ್ತಾರೆ. ಆದರೆ ಕುವೆಂಪುರವರ ದೃಷ್ಟಿ ಕೋನವು ಪ್ರಕೃತಿಯು ಆರಾಧನೆಯ ಹಿಂದಿರುವ ಮನೋಭಾವನೆಯನ್ನು ಕವಿ ಈ ರೀತಿ ಚಿತ್ರಿಸಿದ್ದಾರೆ.

"ಈ ಬಿಳಿ ಮಳಲ ರಾಶಿ ವನಪರ್ಣವಾರಾಶಿ

ನರ್ತಿಸುತ ಪ್ರವಹಿಸುವ ನೀಲಾಂಭ ಜಲರಾಶಿ

ನೀಲನೀರವ ಶಕುನದಂತಿರುವ ಆಕಾಶ (ಅದೇ, ಪು. 405)

ಇಲ್ಲಿ ಕವಿಯೂ ಮನಸ್ಸಿನಲ್ಲಾದಂತಹ ವಿಚಾರಗಳನ್ನು ಕೆಲವು ರೀತಿಯಲ್ಲಿ ಪ್ರಕೃತಿವರ್ಣನೆಯನ್ನು ನೋಡುತ್ತಾ, ನಲಿಯುತ್ತಾ, ಆರಾಧಿಸುತ್ತಾ, ಕಾವ್ಯಗಳನ್ನು ರಚಿಸಲು ಮುಂದಾಗುತ್ತಾರೆ. ಇಲ್ಲಿ ಕುವೆಂಪುರವರ ವರ್ಣನೆಯನ್ನು ಸರಳವಾಗಿ ಅರ್ಥಮಾಡಿಕೊಳ್ಳಲು ಅನುಕೂಲವಾಗುತ್ತದೆ.

ಕುವೆಂಪುರವರು ತಮ್ಮ ಕೃತಿಗಳಲ್ಲಿ ತಮ್ಮ ಕೃತಿಗಳಲ್ಲಿ ಕೆಲವು ಪಾಶ್ಚಾತ್ಯ ಕೃತಿಕಾರರನ್ನು ಈ ರೀತಿ ವ್ಯಕ್ತಪಡಿಸುತ್ತಾರೆ. ನಾಟಕಕಾರನಾದ ಷೇಕ್ಸ್‌ಪಿಯರ್‌ರನ್ನು ಈ ರೀತಿ ಟೀಕಿಸುತ್ತಾರೆ. ಕಾವ್ಯ ಶಕ್ತಿಯಲ್ಲಿ ಷೇಕ್ಸ್‌ಪಿಯರ್ ಹಿಮಾಚಲವಾದರೆ ವರ್ಡ್ಸ್‌ವರ್ತ್ ಕಿರುಗುಡ್ಡ ಆದರೆ ವರ್ಡ್ಸ್‌ವರ್ತ್ ವನದ ಪಕ್ಷಿ ಹಾಡಿ

ಪ್ರಕೃತಿ ಸಂಸರ್ಗದಲಿ ದಿವ್ಯಭಾವವು ಮೂಡಿ

ಆತ್ಮವು ವಿರಾಟದಲಿ ನಿಂತು ವಿಹರಿಸುವಂತೆ

ಮಾಡುವುದೋ, ಕಾವ್ಯರ್ಷಿ,

ಇಬ್ಬರು ಮಹಾನ್ ಕವಿಗಳಾಗಿದ್ದಾರೆ. ಇವರು ಒಂದೊಂದು ರೀತಿಯಲ್ಲಿ ತಮ್ಮ ಕೃತಿಗಳಲ್ಲಿ ವರ್ಣನೆಯನ್ನು ಚಿತ್ರಿಸಿದ್ದಾರೆ.

ಡಾ. ಎಸ್.ಎಂ. ವೃಷಬೇಂದ್ರ, ಸ.ಎಂ. ಧಾರವಾಡ ಈ ದಿನ ಕಂಡು ಕಾಣಿಸುವುದೇ ಸಾಹಿತ್ಯ ಈ ಬಗ್ಗೆ ಕಾಣುವುದೆಮದರೇನು? ಕಾಣಿಸುವುದರೇನೆಂದು, ವಿವರಿಸಿದರು ಕವಿಯ ಸಮಗ್ರಭಾವವನ್ನು ಭಾಷೆಯಲ್ಲಿ ಸಮಗ್ರವಾಗಿ ಹಿಡಿಯಲು ಸಾದ್ಯವಿಲ್ಲ. ಭಾಷೆ ಎಂದಿಗೂ ಸೋಲುತ್ತದೆ. ಭಾವ endless wordsworth ನ Michael ಪದ್ಯದಲ್ಲಿ – 'the never lifted up a single store' ಎಂಬ ಮಾತುಗಳಲ್ಲಿ ಮತ್ತೆ ಒಂದು ಕಲ್ಲನ್ನು ಎತ್ತಿಡಲಿಲ್ಲ' ಎಂದು ಹೇಳಿದರೆ ಹಾಗೆಂದರೆ ಅರ್ಥವೇ ಇಲ್ಲ. ಅದು ಅಲ್ಲಿ ಧ್ವನಿ...ಧ್ವನಿಯೇ ಧ್ವನಿ ಬೇರೆ ಯಾರಲ್ಲಿ... ಮಾತುಗಳು ನಿಮಿತ್ತ ಮಾತ್ರ ಅಷ್ಟೆ.

- Tone the nearest flower that blour can give [thoughs] that do ofter lie, two deep for tears'

ಪುಲ್ಲಿ ಕುಸುಮ ಫಣಾಜಟ, ಪವನಲೀ ಲಲೋಲ ಕಟ..................

ಇಲ್ಲಿನ ಚಿತ್ರ ಕವಿಯ ಭಾವದಹಂದರ ಸಮಾತ್ರ ಅನಂತರ ತಾವು ಬರೆದ ಅನಂತರ ಶ್ರೀ ಗೊಮ್ಮಟೇಶ್ವರ ದರ್ಶನ ಓದಿದರು – ಮಂತ್ರಿ ಚಾವುಂಡರಾಯ ಗೊಮ್ಮಟನನ್ನು ಹುಡುಕುತ್ತ ಬರುವಾಗ ಶ್ರವಣಬೆಳಗೊಳ ಬೆಟ್ಟದ ದೊಡ್ಡ ಕೋಡುಗಲ್ಲನ್ನು ಕಂಡು ಆಕಲ್‌ಶಿಲ್ಪ ಕಂಡುದನೆ ಕಮಡರಿಸಿದನ್ ಕಲ್‌ಗುಂಡನ್ ಆಕಲ್‌ಶಿಲ್ಕಿ ಕಡುದನೆ ಕಂಡರಿಸಿದನ್' (ಪ್ರಭುಶಂಕರ, ಕೃತಿಶೀಲಾ, ಪು. 400) ಎಂದು ಭಾವ ಪೂರ್ಣವಾಗಿ ಓದಿ ಹೇಳಿದರು ಈ ಕವಿಯು ಆ ದರ್ಶನವನ್ನು ಭಾವದಲ್ಲಿ ಕಂಡು, ಅಕ್ಷರದಲ್ಲಿ ಬಿಡಿಸಿದ ಇಲ್ಲಿನ ಅರ್ಥಪೂರ್ಣ ಧ್ವನಿಯನ್ನು ಗಮನಿಸಿ 'ಕಂಡನ್ ಕಂಡನ್' ಎಂಬುದು ದ್ವಿರುಕ್ತಿಯಲ್ಲಿ ಕವಿಯ ಅನುಭವದ ನಿರೂಪಣೆಯ ಉಕ್ತಿ ಮಾತ್ರ. (ಅದೇ, ಪು. 458)

ಕುವೆಂಪು – ಪ್ರಕೃತಿ ಉಪಾಸನೆ – ಸ್ವಯಂ ವಿವರಣೆ ಈ ದಿನ ಪಂಜೆಯವರ ನೆನಪಿಗಾಗಿ' ಎಂಬ ಪುಸ್ತಕವನ್ನು ಓದುತ್ತಿದ್ದ. ಅದರಲ್ಲಿ ಕುವೆರಂಪು ಅವರು ಕವಿಯ ದೃಷ್ಟಿಯಲ್ಲಿ ಪ್ರಕೃತಿ' ಎಂಬ ಲೇಖನ ಬರೆದಿದ್ದಾರೆ. ಅದೊಂದು ಆತ್ಮಚರಿತ್ರೆಯ ಅಧ್ಯಾಯದಂತಿದೆ. ಕುವೆಂಪು ಅವರ ಜೀವನದಲ್ಲಿ ಪ್ರಕೃತಿ ಹೇಗೆ ಅಂತಸ್ತು ಅಂತಸ್ತುಗಳಾಗಿ, ಸಖ್ಯ ಬೆಳೆಯಿಸಿ ಕೊನೆಗೆ ತಾದಾತ್ಯವನ್ನು ಹೊಂದಿತೆಂಬುದರ ನಿಜ ಚಿತ್ರ ಅಲ್ಲಿದೆ. (ಅದೇ, ಪು. 402)

"ಒಮ್ಮೆ ವರ್ಡ್ಸ್‌ವರ್ತ್ ತನ್ನೊಬ್ಬ ಮಿತ್ರನೊಡನೆ ಒಂದು ಪರ್ವತ ಪ್ರದೇಶದಲ್ಲಿ ಸಂಚರಿಸುತಾ ಅದರ ಶಿಖರಸ್ಥಾನವನ್ನು ದಾಟಿ ಒಂದು ಅದ್ಭುತ ದಲಿಕಂದರ ಸೀಮೆಯನ್ನು ದೃಷ್ಟಿಸಿದಾಗ ತನಗಾದ ಭೂಮಾನುತಿಯನ್ನು ಭವ್ಯತೆಯ ಪರಾಕಾಷ್ಟೆಗೆ ನಿದರ್ಶನವೆಂಬಂತೆ ವರ್ಣಿಸಿದ್ದಾನೆ.

"Down words we harried fast,  
And with the half – shaped road which  
We had missed  
Entered a narrow chasm. The brook and road,  
Were follow – travelers in this glvomy strait.

ಇಬ್ಬರು ಕವಿಗಳಲ್ಲಿ ಒಂದು ವಿಶೇಷ ಸನ್ನಿವೇಶಗಳು ಉಂಟಾಗುವುತ್ತವೆ. ಏಕೆಂದರೆ ವರ್ಡ್ಸ್‌ವರ್ತ್‌ರವರು ತಮ್ಮ ಅನುಭವಗಳನ್ನು ಮನಸ್ಸಿನಲ್ಲಿ ಅಂದುಕೊಂಡಂತೆ ಕವನಗಳನ್ನು ಸೃಷ್ಟಿಸುತ್ತ ಹೋದರೆ ಅದರ ಬದಲಾಗಿ ಕುವೆಂಪುರವರು ತಮ್ಮ ಕವನಗಳನ್ನು ಪ್ರಕೃತಿಯ ಚಿತ್ರಣಕ್ಕೆ ಹೊಂದಿಕೊಂಡು ಅಲ್ಲಿನ ಅನುಭವಗಳನ್ನು ಹೇಳಿದ್ದಾರೆ. ಎಂಬುದು ನನ್ನ ಅನಿಸಿಕೆ. ವರ್ಡ್ಸ್‌ವರ್ತ್‌ನಿಗೆ ಪ್ರಕೃತಿಗೆ ವಿವರ ವಿವರಗಳು ಪ್ರಿಯವಾದವು ಎಂಬುದೂ ಅವರ ವರ್ಡ್ಸ್‌ವರ್ತ್ ಆರಾಧನೆಗೆ ಕಾರಣವಾಗಿರಬಹುದು. ಇಲ್ಲಿ ವರ್ಡ್ಸ್‌ವರ್ತ್ ವ್ಯಕ್ತಪಡಿಸಿದ್ದಾರೆ.

These forms of beauty have not been to me.

As is landscape. To a blind man's eye;

But off, in lonely rooms, and mid the din

Of towns and cities, I have owned to them.]

ಪ್ರಕೃತಿಯ ವಿಚಾರವನ್ನು ಕವಿಯು ಇಲ್ಲ ಕಾನದ ವ್ಯಕ್ತಿಯಲ್ಲಿ ಕೆಲವು ವಿಚಾರಗಳನ್ನು ತುಂಬಲು ತನ್ನ ಅನುಭವಗಳನ್ನು ತಿಳಿಸುತ್ತಾನೆ. (ಕುವೆಂಪು, ಪಾಶ್ಚಾತ್ಯ ರೊಮ್ಯಾಂಟಿಕ್ ಕವಿಗಳು, ಪು. 403) ಕುವೆಂಪುರವರು ತಮ್ಮ ಕವನಗಳಲ್ಲಿ ವರ್ಡ್ಸ್‌ವರ್ತ್‌ರವರ ಕವನಗಳಿಗೆ ಹೋಲಿಕೆ ಮಾಡಿದರೆ ಇಲ್ಲಿ ಕುವೆಂಪುರವರು ಪ್ರಕೃತಿಯ ಚಿತ್ರಣವನ್ನು ಆರಾಧನೆಗೆ ಯಾವ ರೀತಿಯ ಅಂಶಗಳು ಮನೋಭಾವನೆಯನ್ನು ಹೀಗೆ ಚಿತ್ರಿಸಿದ್ದಾರೆ.

ಈ ಬಿಳಿ ಮಳಲ ರಾಶಿ ವನಪರ್ಣವರಾಶಿ

ನರ್ತಿಸುತ ಪ್ರವಹಿಸುವ ನೀಲಭ ಜಲರಾಶಿ

ನೀಲನೀರವ ಶರ್ಕುದಂತಿರುವ ಆಕಾಶ

ಎಲ್ಲವೂ ನನ್ನ ದೃಷ್ಟಿಗೆ ಆತ್ಮದಾವೇಶ (ಅದೇ, ಪು. 405)

ಮಲೆನಾಡು ಚಿತ್ರಗಳಲ್ಲಿ ಹೆಚ್ಚಾಗಿ ಆರಾಧನೆ, ಪ್ರಕೃತಿ ವರ್ಣನೆಯನ್ನು ತಮ್ಮ ಅನುಭವವಾಗಿ ತಿಳಿಸಿದ್ದಾರೆ. ಇದರ ಹಿಂದಿನ ಉದ್ದೇಶ ಬೀರಿದ ಪರಿಣಾಮವೆಂದರೆ ವರ್ಡ್ಸ್‌ವರ್ತ್‌ರ ಕವನಗಳೇ ಸ್ಫೂರ್ತಿ ಎಂದು ಹೇಳಬಹುದು. ಏಕೆಂದರೆ ವರ್ಣನೆಯ ವಿಷಯವು ಒಂದು ವಸ್ತುವಿನ ಅದರ ಜೊತೆಗಿನ ಅನುಭವದ ಮೂಲಕ ಬರುವುದೇ ಸತ್ಯಾಂಶಗಳು. ಇಲ್ಲಿ ಇಬ್ಬರು ಕವಿಗಳು ಪ್ರಕೃತಿಪ್ರಿಯರೇ ಆಗಿದ್ದರು ಇಂತಹ ಮಹಾನ್ ರಚನೆಕಾರರು ಸ್ಫೂರ್ತಿಯಾಗಿ ಕವನಗಳನ್ನು ರಚಿಸಿದ್ದಾರೆ. (ಪ್ರೊ. ಪ್ರಭುಶಂಕರ, ಕೃತಿ ಶೀಲ, ಪು. 403 – 405) ಕವಿಗಳಲ್ಲಿ 'calf lobe' (ಕಿಶೋರ ಪ್ರಣಯ) ಎಂದು ಕರೆಯಲ್ಪಡುವ ಪ್ರೇಮ ಕವನವೊಂದು ಸಾಲು ಕವನಗಳುಳ್ಳ ಇಪ್ಪತ್ತು ಪಂಕ್ತಿಯಲ್ಲಿ ಮೂಡಿದ 17–08–1923ರಲ್ಲಿ ಅವರ ಕೊನೆಯ ಪದ್ಯ ಹೇಗಿದೆ. ಬಹುಶಃ ವರ್ಡ್ಸ್‌ವರ್ತ್‌ನ ಲ್ಯೂಸಿ ಕವನಗಳಿಂದ ಪ್ರೇರಿತನಾಗಿ!

I love three not for earlally pleasures

But for the joy heaves;

And in the heart live holy treasures

But to few madens given.

ಮುಂದಿನ ಈ ಕವನದಲ್ಲಿ ತರುಣ ಕವಿಯ ಚಿಂತನೆ ಪ್ರಪಂಚದಲ್ಲಿ ಆಗ ನಡೆಯುತ್ತಿದ್ದ ಆಲೋಚನೆಗಳ ಮತ್ತು ಭಾವನೆಗಳ ಮಂಥನ ಸ್ವರೂಪ ಪ್ರದರ್ಶನವಾಗುತ್ತದೆ. ಎಂಟು ಸಾಲುಗಳು ಪಲ್ಲವಿಯಂತೆ ಪುನರಾವೃತ್ತವಾಗುತ್ತದೆ. ಅಂದರೆ ಇಪ್ಪತ್ತು ಸಾಲುಗಳು ಪದ್ಯ, ನಾಲ್ಕು ಸಾಲುಗಳು ಪಲ್ಲವಿ ಎಂದು ಹೇಳಬಹುದು. ಅದರ ಶೀರ್ಷಿಕೆ "All Things Befin alone they shall end" ಎಂದಿದೆ.

(ಎಲ್ಲ ಕೊನೆಗಾಣುವಲ್ಲಿ ಎಲ್ಲಿ ಮೊದಲಾಗುತ್ತಾರೆ)

The sun soars high up in the east

Across the blue he sauls;

And in the west he sink afain

Not even a day  hefails.

All things begin where they shall end;

Drstruction only helps to merd

And why not I when I shll die

Be born again to shine this maies? (ಕುವೆಂಪು, ನೆನಪಿನ ದೋಣಿಯಲ್ಲಿ, ಪು. 207)

ಇಲ್ಲಿನ ಪ್ರಾಸಗಳನ್ನು ಗಮನಿಸಬಹುದು. ಎರಡನೆಯ ಪಂಕ್ತಿ, ನಾಲ್ಕನೆಯ ಪಂಕ್ತಿಗಳಿಗೆ, ಐದು ಆರನೆಯ ಪಂಕ್ತಿಗಳಿಗೂ ಅಂತ್ಯ ಪ್ರಾಸವಿದೆ. ಏಳು ಎಂಟನೆಯ ಪಂಕ್ತಿಗಳಲ್ಲಿ ಮಧ್ಯಪ್ರಾಸಗಳಿವೆ. ಅವನ್ನು ಹೀಗೆ ಬರೆದರೆ ಗೊತ್ತಾಗುತ್ತದೆ.

And why not I

When I shall die



Be born again

To swim the maies?

ಮುಂದೆ ಕನ್ನಡದಲ್ಲಿ ನಾನು ಬರೆಯಲು ತೊಡಗಿದಾಗ ಈ ಇಂಗ್ಲಿಷ್‌ನ ಛಂದೋವೈವಿಧ್ಯತೆಗಳಿಂದಲೇ ಸ್ಫೂರ್ತಿ ಪಡೆದದು.

The plant projects our of a seed

And soon becomes a tree;

But when it fades it leaves behird

A mother – seed to me… all things etc…  When we were out for floweres The jasmine Bower. ಮಲ್ಲಿಗೆ ಹೂಗಳು ಮರದಿಂದ ಉದುರಿದವು ಎಂದಿದೆ. ಕುಪ್ಪಳ್ಳಿಯಲ್ಲಿ ಮಲ್ಲಿಗೆ ಬಳ್ಳಿ ಕಾಡಂಚಿನಲ್ಲಿದ್ದ ಒಂದು ಮರಕ್ಕೆ ಹಬ್ಬತ್ತು. ಹೂವು ಮರದಿಂದ ಬೀಳುತ್ತಿದ್ದವು.

**When we were out for flowers  for flowers**

The sweat showr fell like pearls from heaven,

It pattered on trees and flowers;

The earth rejoiced and heaved and fell

Wit h the glory of shower – blo oned flowe ಕಾವ್ಯ ಎಂಬುದರ ಬಗೆಗೂ ಅವರಿಗೆ ಇರುವ ಕಲ್ಪನೆ ಡಿ. (ಅದೇ, ಪು. 209)

ಉದಾತ್ತವಾದದ್ದು. ಕಲ್ಪನೆ ಅಥವಾ ಪ್ರತಿಭೆಯ ಶಕ್ತಿ ಸಾಮರ್ಥ್ಯಗಳನ್ನು ಕುರಿತಂತೆ ಅವರಿಗೆ ಅಪಾರವಾದ ನಂಬಿಕೆಯುಂಟು. ಕಾವ್ಯಬರೆಯುವುದರ ಬಗ್ಗೆ ಅವರಿಗೆ ತುಂಬಾ ಆಸಕ್ತಿಯುಕ್ತವಾಗಿತ್ತು. ವಾಸ್ತವಿಕ ಹಾಗೂ ಭಾವನೆ ಇವುಗಳ ಸಂಬಂಧವೂ ಅವರಿಗೆ ಸ್ವಚ್ಚವಾಗುವಂತಿತ್ತು. ಇವೆಲ್ಲ ಭಾವನೆಗಳಲ್ಲಿ ಮೂಖ್ಯವಾಗಿ ಸಂಬಂಧಕವಾಗಿರುತ್ತದೆ.

"ಹೀಗೆ ಇಂಗ್ಲಿಷ್ ರೊಮ್ಯಾಂಟಿಕ್ ತತ್ವವನ್ನು ವರ್ಡ್ಸ್‌ವರ್ತ್ ಪ್ರಕೃತಿ ಸಮೀಪ್ಯದ ವಾಸ್ತವಿಕತೆಯನ್ನು ಷೆಲ್ಲಿಯ ದಾರ್ಶನಿಕ ಅತೀತತ್ವವನ್ನು ಒಳಗೊಳ್ಳಬಲ್ಲಿದಾಗಿದೆ. ತನ್ನ ಸ್ವತಂತ್ರ್ಯ ಪ್ರವೃತ್ತಿಯಿಂದಾಗಿ ಅದು ಅನೇಕ ಧ್ವನಿ ಪೂರ್ಣ ವಿಮರ್ಶಾ ಭಾವನೆಗಳನ್ನು ಶ್ರೀಮಂತವಾದ ಕಾವ್ಯ ಸಮೃದ್ಧಿಯನ್ನು ಸೃಷ್ಟಿಸಲು ಸಮರ್ಥವಾಯಿತು". ಕುವೆಂಪುರವರ ಕೃತಿಗಳಲ್ಲಿ ಇಂಗ್ಲಿಷ್ ರೊಮ್ಯಾಂಟಿಕ್ ಕವಿಗಳ ಈ ಎಲ್ಲ ಅಂಶಗಳೂ ಕಾಣಸಿಗುತ್ತವೆ. 'ವ್ಯಕ್ತಿ ಅಥವಾ 'ಕವಿ' 'ನಾನು' ಅವರ ಭಾವನೆಗಳಲ್ಲಿನಂತೆ ಬೇರೆ ಕನ್ನಡ ಕವಿಗಳ ಕಾವ್ಯದಲ್ಲಿ ಎದ್ದು ಕಾಣುವುದು ನಮ್ಮ ಗಮನಕ್ಕೆ ಬಂದಿಲ್ಲ, ಪ್ರಕೃತಿ ಪ್ರೇಮ ದಾರ್ಶನಿಕತೆ ಕಲ್ಪನೆ ಅಥವಾ ಪ್ರತಿಭೆಯ

ಪರಮೋಚ್ಚ ಸ್ಥಾನದ ಬಗ್ಗೆ ನಂಬಿಕೆ ಇವುಗಳಿಗೆ ನಿದರ್ಶನ ನೀಡುವ ಅಗತ್ಯ ಇಲ್ಲ. ಪಂಕ್ತಿಗಳಿಗೆ ಕುವೆಂಪುರವರ ಇಂತಹ ಪಂಕ್ತಿಗಳಿಗೂ ಸಾಮ್ಯವಿದೆ ಎಂದು ಈಗಾಗಲೇ ವಿಮರ್ಶಕರು ತೋರಿಸಿದ್ದಾರೆ. ಕುವೆಂಪುರವರ ಕಾಲಕ್ಕೆ ಇಂಗ್ಲಿಷ್ ಮೂಲಕವಾಗಿ ದೊರೆಯಬಹುದಾಗಿದ್ದ ಪಕ್ಷಿ ಮತ್ತು ಶ್ರೇಷ್ಠ ಕೃತಿಗಳಲ್ಲಿ ಬಹುಭಾಗವನ್ನು ಇಂಗ್ಲಿಷ್‌ನ ಶ್ರೇಷ್ಠ ಸಾಹಿತ್ಯದ ಬಹು ಭಾಗದಂತೆಯೇ ಓದಿದ್ದವರು, ಅವರ ಕಾವ್ಯಗಳಲ್ಲಿ ಪಶ್ಚಿಮದ ಕವಿಗಳ ಪ್ರಭಾವ ಇರುವುದು ಅನಿವಾರ್ಯ, ಆದರೆ ಅವರ ಅತ್ಯಲ್ಪ ಅವರ ಸತ್ಯಶಾಲಿಯಾದ ಬರವಣಿಗೆ ಸಾರ್ವತಂತ್ರವಾದದ್ದು ಪ್ರಕೃತಿ ಪ್ರೇಮದ ವಿಷಯದಲ್ಲಿ ಅವರ ಮನಸ್ಸು ಪಶ್ಚಿಮದ ಕಾವ್ಯಗಳನ್ನು ಓದುವುದಕ್ಕೆ ಮುಂಚೆಯೇ ರೂಪಿತವಾದದ್ದು ಎಂದು ಸೂಚಿಸಿದ್ದಾಗಿದೆ. ಇನ್ನು ಆಧ್ಯಾತ್ಮದ ವಿಷಯದಲ್ಲಿ ಅವರು ಪಶ್ಚಿಮದಿಂದ ಕಲಿಯಬೇಕಾದದ್ದು ಏನೂ ಇರಲಾರದು ಎಂದು ಸ್ಪಷ್ಟವಾಗಿ ಹೇಳಬಹುದು. (ಅದೇ, ಪು. 411–412)

ಕುವೆಂಪುರವರ ತಮ್ಮ ಕವನ ಸಾಲುಗಳನ್ನು ಗಮನಿಸಿದರೆ ಇಲ್ಲಿ ಕೆಲವು ಮನಮುಟ್ಟುವಂತಹ ಸಾಲುಗಳನ್ನು ತಿಳಿಯಬಹುದಾಗಿದೆ. ಅವರ ಮುಂದಿನ ಕವನದ ಸಾಲು ಈಗಿದೆ. I She is fair like a jasmine flower ಎಂದು ರಾತ್ರಿ ಒಬ್ಬನೆ ಒಂಟಿಯಾಗಿ ಮಲಗಿದೆ ತಾಯಿಯೊಡನೆ ಐಕ್ಯತೆಯನ್ನು ಅನುಭವಿಸುತ್ತಾ; ಮೇಲಿನ The Wood land maid (ವನಕನ್ಯೆ)

She is fair like a jasmine flower,

She is sweet like a sacred through;

And to me who is her dear lover

She is pure without aspot

ಇಂತಹ ಸಾಲುಗಳು ಓದುಗರಲ್ಲಿ ಕುವೆಂಪುರವರು ತಮ್ಮ ಕವಿತೆಗಳ ಮೂಲಕ ಜನರ ಮನಸ್ಸಿಗೆ ಹಿಡಿಸುತ್ತಾರೆ. (ಅದೇ, ಪು. 329)

ವರ್ಡ್ಸ್‌ವರ್ತ್ ಕವಿಯ ಮೇಲೆ ಈ ಘಟನೆ ತೀವ್ರವಾದ ಪರಿಣಾಮವನ್ನು ಉಂಟುಮಾಡಿದೆ. ಎಂಬ ಕಾರಣಕ್ಕಾಗಿ ಇದಕ್ಕೆ ಇಷ್ಟೆ ಪ್ರಾಮುಖ್ಯತೆ ದೊರಕಿತೆ ಹೊರತು ಕವಿಯ ಖಾಸಗಿ ಜೀವನವನ್ನು ಹೊಂಚು ಹಾಕಿ ನೋಡಬೇಕೆಂಬ ಉದ್ದೇಶ ವಿಮರ್ಶಕರಿಗೆ ಇರಲಿಲ್ಲ. ಹಾರ್ಬರ್ಟ್‌ರೀಡ್ ಅವರಿಗಂತೂ ಇರಲಿಲ್ಲ.

ಇಲ್ಲಿ ನಮಗೆ ಸಂಗತವಾಗಿರುವ ಪ್ರಶ್ನೆ ಬೇರೆ ರೀತಿಯದು. ಒಂದು ಹೆಣ್ಣನ್ನು ಪ್ರೀತಿಸುವುದಾಗಲೀ ಅವಳಿಂದ ಮಗುವನ್ನು ಪಡೆಯುವುದಾಗಲೀ, ಅನಂತರ ಅವಳನ್ನು ಮರೆಯುವುದಾಗಲೀ, ಆ ಇಡೀ ಘಟನೆಯನ್ನೇ ಮುಚ್ಚಿಡುವಂತವುದಾಗಲೀ ನೈತಿಕವಾಗಿ ಸರಿಯೇ ತಪ್ಪೆ ಎಂಬ ಪ್ರಶ್ನೆ ಮುಖ್ಯವಲ್ಲ.

ಮುಖ್ಯವಾದದ್ದು ಎಂಬುದು ಕುವೆಂಪು ಹೇಗೆ ನೋಡುತ್ತಿದ್ದರು ಎಂಬುದು, ಕುವೆಂಪು ಶುದ್ಧವಾದ ಬದುಕನ್ನು ನಡೆಸುತ್ತಾ ಬಂದವರು, ಮಾತ್ರವಲ್ಲದೆ ಶುದ್ಧವಾದ ಬದುಕನ್ನು ತುಂಬ ಮೆಚ್ಚಿರುವವರು. ಮಡಿಯೊಳಗಿರಲಿಬಾಳ್ವೆ ಎಂಬುದು ಅವರ ಪಾರ್ಥನೆ. ಹೋಮರನ ನಾಯಕಿ ಹೆಲೆನ್ ಇನ್ನೊಬ್ಬನ ಜೊತೆ ಓಡಿಹೋದಳು ಎಂಬ ಕಾರಣಕ್ಕೆ ಕುವೆಂಪು ಅವರಿಗೆ ಅವನ ಕಾವ್ಯ ಪ್ರತಿಯವಾಗಲಿಲ್ಲ. ಸೀತೆಯ ಶುಚಿಗೆ ರಾಮಾಯಣವೊರೆದನಾದಿ ಕವಿ ವಾಲ್ಮೀಕಿ. ಆ ಶುಚಿಯ ಗಂಗೆಯೊಳಗೆ ಎಂದನಗೆ ಸಹಿಸದಯ್ ಕೆಸರಿ ನೋಕುಳಿಯ ನಿನ್ನದ್ಭುತ ರಣಕ್ರೀಡೆ" [ಹೋಮರ್ : ಕೃತಿಕೆ] ಕುವೆಂಪು ಅವರ ಮನಸ್ಸಿನ ಮೇಲೆ ವರ್ಡ್ಸ್‌ವರ್ತ್ ತುಂಬ ಗಾಢವಾಧ ಪ್ರಭಾವವನ್ನು ಬೀರಿದ್ದಾನೆ. ಅವನಂತೆ ಭೂಮಾನುಭೂಲೆಯನ್ನು ಪಡೆದ ಕವಿ ಬೇರೊಬ್ಬ ಅವರಿಗೆ ಆಂಗ್ಲ ಕವಿಗಳಲ್ಲಿ ಕಾಣುವುದಿಲ್ಲ. ಪ್ರಕೃತಿ ಪ್ರಯತೆ ಮಾತ್ರವಲ್ಲದೆ ಭೂಮಾನುಭೂತಿಯ ಜಡೆಗೆ ಸದಾ ಒಲವನ್ನು ಬೆಳೆಸಿಕೊಂಡಿರುವ ಕುವೆಂಪು ಅವರಿಗೆ ವರ್ಡ್ಸ್‌ವರ್ತ್ ಉಳಿದ ಪಾಶ್ಚಾತ್ಯ ಕವಿಗಳಿಗೆ ಹೋಲಿಸಿದರೆ ಅತ್ಯಂತ ಉತ್ತರದಲ್ಲಿ ನಿಂತಂತೆ ಕಾಣಸಿದ್ದರಲ್ಲಿ ಏನೇನೂ ಆಶ್ಚರ್ಯವಿಲ್ಲ; ಅವರು ಹೇಳುತ್ತಾರೆ. (ಪ್ರಭುಶಂಕರ, ಕೃತಿಶೀಲ, ಪು. 401)

ನಿಸರ್ಗ ದೃಶ್ಯಗಳಲ್ಲಿ ಪ್ರಕೃತಿ ಸಾನ್ನಿಧ್ಯದಲ್ಲಿ ನಿರ್ಜನ ಪ್ರದೇಶಗಳಲ್ಲಿ ಪರ್ವತಾಗ್ರಗಳಲ್ಲಿ ಬಾನುಬಂಡೆ ಬೆಟ್ಟ ಝುರಿ ಗಿರಿ ಕಂದರ ಕಾಡುಗಳ ರುದ್ರ ರಮಣೀಯ ಜನ ಏಕಾಂತದ ಸಹಚರ್ಯದಲ್ಲಿ ದರ್ಶನ ಕವಿಯಾದ ವರ್ಡ್ಸ್‌ವರ್ತ್‌ಗೆ ಭೂಮದ ಅನುಭೂತಿ ಅನಿವಾರ್ಯವಾದ ಅನುಭವವಾಗಿ ಪರಿಣಮಿಸಿತ್ತು. ಆತನ ಚೈತನ್ಯದ ಸ್ವತಃ ಸಿದ್ಧವಾದ ಸ್ವಭಾವವ ಭೂಮಾವರವಾಗಿದ್ದಂತೆ ತೋರುತ್ತದೆ. ಆತನ ಸುಪ್ರಸಿದ್ಧ

ಮಹಾಭಾವಗೀತೆಗಳಲ್ಲಿಯೂ ಆತ್ಮಕಥನರೂಳಾದ Prelude ಮತ್ತು Excursion ಗಳಲ್ಲಿಯೂ ಭವ್ಯತೆಗೇರಿದ ಭೂಮಾನುಭೂತಿಯ ಪವಿತ್ರ ಪೂಜಾಸ್ಥಾನಗಳನ್ನು ಮತ್ತೆ ಮತ್ತೆ ಸಂದರ್ಶಿಸುತ್ತೇವೆ. ಆ ಕಾವ್ಯ ಲೋಕದಲ್ಲಿ ಆವೃತ್ರಿಯಾಗುವ ಸಹೃದಯನು ಪುನಃ ಪುನಃ ಬ್ರಾಹ್ಮೀ ಪ್ರಜ್ಞೆಯ ಭವ್ಯ ಕ್ಷೇತ್ರಗಳನ್ನು ಪ್ರವೇಶಿಸಿ ಪುನೀತನಾಗುವ ಅನುಭವವನ್ನು ಪಡೆಯುವುದರಿಂದಲೇ ಬಾಡ್ಲೆಯ ವಿಮರ್ಶೆ ತುತ್ತ ತುದಿಯಲ್ಲಿ For me, I confess all this is for from being more poeatry ಎಂಬ ಗೌರವ ಪೂರ್ಣವಾಧ ವಿನೋಕ್ತಿಯಲ್ಲಿ ಕೈ ಮುಗಿದು ಹಣೆಮಣಿದು ನಮಸ್ಕರಿಸಿ ಬೀಳ್ಕೊಟ್ಟಿದ್ದರು.

ಆದರೆ ಇಂದಿಗೂ ಅತ್ಯಾಶ್ಚಾರ್ಯಕರ ಸಂಗತಿಯೆಂದರೆ ವರ್ಡ್ಸ್‌ವರ್ತ್‌ನ ಯಾವ ಪಂಕ್ತಿಗಳನ್ನು ಕುವೆಂಪು (ಕವಿ)ತನಗಾದ ಭೂಮಾನುಭೂತಿಯನೂ ಭವ್ಯತೆಯ ಪರಾಕಾಷ್ಟೆಗೆ ನಿದರ್ಶನವೆಂಬಂತೆ ವರ್ಣಿಸಿದ್ದಾನೆ. ಎಂದು ಹೇಳಿಉದ್ಧರಿಸುತ್ತಾರೆ. ಭೂಮಾನು ಭೂತಿಯೂ ನಮಗೆ ಉಂಟಾಗುವುದಿಲ್ಲ. ತಮ್ಮದೇ ಮಹಾ ಕಾವ್ಯದ ರಚನೆಯಾದ ಮೇಲೆ ಅಥವಾ ಭೂಮಾನುಭೂತಿಯ ವಿಷಯದಲ್ಲಿ ತಮ್ಮ ಅಭಿಪ್ರಾಯ ಈಗ ಬದಲಾಗಿದ್ದಾರೆ. ಅದರ ಪ್ರತಿಕ್ರಿಯೆ–ಇಂಥ ಕಾವ್ಯ ಭಾಗಗಳನ್ನು ಕುರಿತು – ಏನು ಎಂಬುದು ತಿಳಿದರೆ ಸ್ವಾರಸ್ಯವಾಗಿರುತ್ತದೆ. (ಪ್ರಭುಶಂಕರ, ಕೃತಿಶೀಲ, ಪು. 402)

## ಮಲೆನಾಡಿನ ಚಿತ್ರಗಳು ಕೃತಿ ರಚನೆಗೆ ಕಾರಣವಾದ ಅಂಶಗಳು

1. **ಮಲೆನಾಡು** : "ಹುಟ್ಟಿದ ಮೂಲ ಇಲ್ಲದಿದ್ದರೆ ತುತ್ತಿನ ಹಂಗನು ಕಾಣುವುದು ಕಷ್ಟವಂತೆ" ಏಕೆ ಈ ಮಾತು ಹೇಳುತ್ತಿದ್ದಾನೆ. ಎಂದರೆ ಮೊದಲಿಗೆ ಮಲೆನಾಡು ಕುವೆಂಪುರವರ ತವರು ಎಂದು ಹೇಳಬಹುದು ಇಲ್ಲಿ ನಡೆಯುವಂತಹ ಪ್ರತಿಯೊಂದು ಅಂಶಗಳು ಕುವೆಂಪುರವರ ಮೇಲೆ ಅತಿ ಹೆಚಿನ ಪ್ರಭಾವ ಬೀರಿದ ಅಂಶಗಳಾಗಿವೆ. ಏಕೆಂದರೆ ಮಲೆನಾಡಿನ ಪರಿಸರವು ಹಚ್ಚಹಸುರಿನಿಂದ ಕೂಡಿ ವಾತವರಣವಗಿದೆ. ಇಂತಹ ವಾತವರಣದಲಿ "ಮಲೆನಾಡಿನ ಚಿತ್ರಗಳನ್ನು" ರಚಿಸುವಾಗ ನಿಶ್ಚಬ್ಧತೆಯಿಂದ ಕೂಡಿದ ಪರಿಸರದ ಪಾತ್ರ ಬಹುಮುಖ್ಯವಾಗುತ್ತದೆ. ಎಂದು ನನ್ನ ಹನಿಸಿಕೆಯಾಗಿರುತ್ತದೆ. ಕುವೆಂಪುರವರು ಹೇಳಿರುವಂತೆ ನಿಸರ್ಗದ ಪ್ರೀತಿಗೆ ಸೋಲದವರಿಲ್ಲ. ಆದರೆ ನಿಸರ್ಗದಲ್ಲಿ ಇಂತಹ ವ್ಯಕ್ತಿಯನ್ನು ಸೋಲಿಸಿದವರೆ ಇಲ್ಲಾ ಏಕೆ ಈ ಮಾತನ್ನು ಪ್ರಸ್ತಾಪಮಾಡುತ್ತೇನೆ. ಎಂದರೆ ಕುವೆಂಪು ರವರು ಬರೆಯದೆ ಇರುವಂತಹ ಕಥೆ, ಕವನ, ಕಾದಂಬರಿಗಳು, ಕವಿತೆಗಳು, ಸಾಹಿತ್ಯವೇ ಇಲ್ಲವೆಂದು ಹೇಳಬಹುದು. ಪ್ರಕೃತಿಯ ಸೌಂದರ್ಯಕ್ಕೆ ಬೆಲೆ ಜಾಸ್ತಿ ಅದರಂತೆ ಪ್ರಕೃತಿಯನ್ನು ವರ್ಣಿಸುವುದರಲ್ಲಿ ಇವರ ಪಾತ್ರ ಬಹು ಮುಖ್ಯವಾದುದು ಮಲೆನಾಡಿನಲ್ಲಿ ಕಂಡುಬರುವ ಬೆಟ್ಟ-ಗುಡ್ಡ, ಪ್ರಾಣಿ-ಪಕ್ಷಿ, ಪ್ರತಿಯೊಂದು ಜೀವಿಯು ಸಹ ಕುವೆಂಪುರವರಿಗೆ ಸ್ಫೂರ್ತಿಯಾಗಿದೆ ಎಂದು ಹೇಳಬಹುದು.

2. **ಭಾವನೆಗಳು ಮತ್ತು ಅನುಭವಗಳು** :

ಭಾವನೆಗಳು ಮತ್ತು ಅನುಭವಗಳು ಮನುಷ್ಯನ ಎರಡು ಕಣ್ಣುಗಳು ಇದ್ದಾಹಾಗೆ ಏಕೆಂದರೆ ಒಂದು ಮತ್ತೊಂದನ್ನು ಅವಲಂಬಿಸಿರುತ್ತದೆ. ಅನುಭವಗಳು ಮೂರ್ಯೆಸಿದಾಗ ಭಾವನಗಳು ಮೂಡುತ್ತವೆ. ಇಂತಹ ವಿಚಾರಗಳು ಕುವೆಂಪುರವರ ಮೇಲೆ ಮೂಡಿರಬಹುದು. ಏಕೆಂದರೆ ಇಲ್ಲಿನ ಪ್ರತಿಯೊಂದು ಪಾತ್ರಕ್ಕೆ ಜೀವ ತುಂಬುವುದು ಕಷ್ಟಕರ ವಿಚಾರ ಏಕೆಂದರೆ ಇಲ್ಲಿನ ಪಾತ್ರಗಳನ್ನು ಅನುಭವದ ಮೂಲಕ ವಿವರಿಸುತ್ತಾ ಭಾವನೆಗಳನ್ನು ಅರ್ಥೈಸುವಲ್ಲಿ ಮಲೆನಾಡಿನ ಚಿತ್ರಗಳಲ್ಲಿ ಸೆರೆಹಿಡಿದಿದ್ದಾರೆ. ತಾವು ಕಾಡಿನಲ್ಲಿ ಕಳೆದ ಒಂದಿರುಳು" ಇಲ್ಲಿನ ಅಂಶಗಳು ಅನುಭವಗಳ ಮೂಲಕ ಆವರಿಸಿದಂತಹ ಅಂಶಗಳೇ ಹೆಚ್ಚಾಗಿವೆ. ಜೊತೆಗೆ ಕತೆಗಾರ ಮಂಜಣ್ಣ ಪಾತ್ರವನ್ನು ಗಮನಿಸಿದಾಗ ಕುವೆಂಪುರವರಿಗೆ ಭಾವನೆಗಳಿಗೂ ಹೆಚ್ಚಾಗಿ

ಉಂಟಾಗುತ್ತಿರುತ್ತದೆ. ಏಕೆಂದರೆ ಕಥೆಯನ್ನು ಕೇಳುವುದು ಭಯ, ಭಕ್ತಿಯಿಂದ ಅನುಸರಿಸುವುದು ಎಲ್ಲರನ್ನು ಸಮನಾಗಿ ಕಾಣುವುದು ಇಂತಹ ಗುಣಗಳಿಂದ ಸಾಧ್ಯವಾಗಿದೆ.

**3. ಗುರುಗಳು :** "ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಗುತಿ" ಎಂಬ ಸಾಲುಗಳು ಗುರುವಿನಲ್ಲಿ ಹಾರೈಸಿ ಅವರಿಂದ ಪಡೆದ ವಿದ್ಯೆಯೇ ಮುಂದಿನ ದಾರಿದೀಪವಾಗುತ್ತದೆ. ಇಂತಹ ದ್ವೀಪಗಳು ಕುವೆಂಪುರವರ ಪಾಲಿಗೆ ವಿದ್ಯೆ ದ್ವೀಪಗಳಾಗಿ ಹತ್ತಿ ಉರಿದು ಹೋಗಿವೆ. ಒಂದು ವೆಂಕಣ್ಣಯ್ಯನವರು ಮತ್ತೊಬ್ಬರು. ಬಿ.ಎಂ.ಶ್ರೀ. ರವರು ಇವರು ಕೆಲವು ವಿಚಾರಗಳನ್ನು ತಿಳಿಸಿ ಅವರು ವ್ಯಕ್ತಪಡಿಸಿದ ವಿದ್ಯೆ-ಗುಣಗಳನ್ನು ಅಳವಡಿಸಿಕೊಂಡು ಕುವೆಂಪುರವರು ಪ್ರಜ್ವಲಿಸುವ ದಾರಿದೀಪವಾಗಿದ್ದಾರೆ. ಇವರ ಪಾತ್ರ ಕೆಲವು ರಚನೆಗೆ ಮುಖ್ಯವಾಗಿವೆ ಎಮದು ಹೇಳಬಹುದು.

**4. ಸಾಮಾಜಿಕ ಜೀವನದ ಸ್ಥಿತಿಗತಿಗಳು :**

ಮಲೆನಾಡಿನಲ್ಲಿ ಕಂಡುಬರುವಂತಹ ಪ್ರತಿಯೊಂದು ಚಟುವಟಿಕೆಗಳು ಕೆಲವು ರೀತಿಯ ವ್ಯತ್ಯಾಸಗಳು ಕಾಣಬಹುದು ಅದರಲ್ಲಿ ಸಾಮಾಜಿಕ ಜೀವನ ಯಾವರೀತಿ ನಡೆದುಕೊಂಡು ಹೋಗುವುದನ್ನು ಕುವೆಂಪುರವರು ಚಿತ್ರಿಸಿದ್ದಾರೆ. ಜನರು ಯಾವ ರೀತಿಯ ಬದುಕನ್ನು ಕಟ್ಟಿಕೊಳ್ಳತ್ತಾರೆ. ಎಂಬುದು ಅವರ ವೃತ್ತಿಯ ಮೇಲೆ ಅವಲಂಬಿತವಾಗಿರುತತ್ತದೆ. ಏಕೆಂದರೆ ಕೆಲವರು ಸಂಪ್ರದಾಯಗಳಿಗೆ ಮುಖಮಾಡಿದ್ದಾರೆ ಮತ್ತೊಬ್ಬರು ಆಚರಣೆ-ನಂಬಿಕೆಗಳು, ಕಟ್ಟುಪಾಡಿಗೆ ಒಳಗಾಗುತ್ತಿದ್ದರು ಇಂತಹ ಕೆಲವು ರೀತಿ-ನೀತಿಗಳನ್ನು ಎಳೆ-ಎಳೆಯಾಗಿ ಬಿಡಿಸಲು ಕುವೆಂಪುರವರು ಮುಖ್ಯವಾಗುತ್ತಾರೆ. ಮಲೆನಾಡಿನಲ್ಲಿ ಜನರು ತಮ್ಮ ಕೆಲಸಕಾರ್ಯಗಳನ್ನು ತಮ್ಮದೇ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಾರೆ. ಅದರಲ್ಲೂ ಬೇಟೆಯ ಪ್ರಸಂಗವೂ ಒಂದು ಮತ್ತು ಕೃಷಿಚಟುವಟಿಕೆಗಳನ್ನು ಅವಲಂಬಿತವಾಗಿದ್ದರು. ಇಂತಹ ಕೆಲವು ಪ್ರಮುಖ ವಿಷಯಗಳು ಕುವೆಂಪುರವರ ಮನಸ್ಸಿನ ಮೇಲೆ ತೀವ್ರ ಪರಿಣಾಮ ಬೀರಬಹುದು.

## 5. ಶ್ರದ್ಧೆ – ಭಕ್ತಿ :

ಕುವೆಂಪುರವರಿಗೆ ಅತ್ಯಮೂಲ್ಯವಾದ ಸಂಗತಿಗಳೆಂದರೆ ಶ್ರದ್ಧೆ – ಭಕ್ತಿ ಏಕೆಂದರೆ ಇವೆರಡರಿಂದ ಎಂತಹ ಮನುಷ್ಯನನ್ನು ಉನ್ನತಮಾರ್ಗಕ್ಕೆ ಕೊಂಡೊಯ್ಯಬಹುದು. ಕುವೆಂಪುರವರ ಆಧ್ಯಾತ್ಮಿಕ ಜೀವನವನ್ನು ಪುಷ್ಟಿಗೊಳಿಸಲು ಅವರಿಗೆ ಶ್ರೀ ರಾಮಕೃಷ್ಣ ಪರಮಹಂಸರ ನೇರಶಿಷ್ಯರಾಗಿದ್ದ ಹಾಗೂ ಶ್ರೀ ರಾಮಕೃಷ್ಣ ಮಹಾಸಂಘದ ಅಧ್ಯಕ್ಷರೂ ಆಗಿದ್ದ ಸ್ವಾಮಿ ಶಿವಾನಂದರಿಂದ ಮಂತ್ರ ದೀಕ್ಷೆ ಕೊಡಿಸಬೇಕೆಂದು ಸಿದ್ದೇಶ್ವರ ಸ್ವಾಮಿಗಳು ನಿರ್ಧರಿಸಿದರಂತೆ; ಏಕೆಂದರೆ ಇಲ್ಲಿ ಭಕ್ತಿಯ ಎಲ್ಲಾ ಮಾರ್ಗವನ್ನು ಅನುಸರಿಬಹುದು. ಏಕೆಂದರೆ ಯಾವುದೇ ಮನುಷ್ಯನನ್ನು ಮನಸ್ಸು ಕೇಂದ್ರೀಕರಿಸುವ ಜಾಗವೆಂದರೆ ಭಕ್ತಿ. ಇಲ್ಲಿ ಅಳವಡಿಸಿಕೊಂಡ ಗುಣಗಳು ಪರಿಪೂರ್ಣವಾಗುತ್ತವೆ. ವಿವೇಕನಂದರ ಮಾತುಗಳು ಅವರ ಮನಸ್ಸಿನ ಮೇಲೆ ಪರಿಣಾಮ ಬೀರಿದಂತಹ ಪ್ರಭಾವವಾಗಿದೆ.

ಕುವೆಂಪು ಅವರಿಗೆ ಬಾಲ್ಯದಿಂದ ಈ ದೇಶದ ಮಹಾಕಾವ್ಯಗಳ ಪರಿಚಯವಿತ್ತು. ಮಲೆನಾಡಿನಲ್ಲಿ ಹಳ್ಳಿಯ ಜೀವನವನ್ನು ಅನುಭವಿಸಿದ್ದರು. ಮೈಸೂರು – ಬೆಂಗಳೂರಿನ್ಲಲಿ ನಗರ ಜೀವನವನ್ನು ಕಂಡಿದ್ದರು. ಸುತ್ತ ಮುತ್ತಲಿನ ದೃಶ್ಯಗಳ ಬದುಕನ್ನು ಜನರನ್ನು ಸೂಕ್ಷ್ಮವಾಗಿ ಕಾಣುವ ಪರಿಭಾವಿಸುವ ಸ್ವಭಾವ ಅವರದು. ಕನ್ನಡ ಸಾಹಿತ್ಯ, ಸಂಸ್ಕೃತ ಸಾಹಿತ್ಯ, ಇಂಗ್ಲಿಷ್ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿದ್ದರು. ನಮ್ಮ ದೇಶದ ಮತ್ತು ಪಾಶ್ಚಾತ್ಯ ದೇಶಗಳ ತತ್ವಶಾಸ್ತ್ರವನ್ನು ಅಭ್ಯಾಸ ಮಾಡಿದ್ದರು. ರಾಮಕೃಷ್ಣ ಪರಮಹಂಸ ಮತ್ತು ವಿವೇಕಾನಂದರ ಚಿಂತನೆ ಅವರಿಗೆ ರಕ್ತಗತವಾಗಿತ್ತು. ಬುದ್ಧನ ಬದುಕನ್ನು, ಚಿಂತನೆಯನ್ನು, ವ್ಯಕ್ತಿತ್ವವನ್ನೂ ಮೆಚ್ಚಿದ್ದರು, ಗಾಂಧೀಜಿಯ ಬದುಕನ್ನು, ಚಿಂತನೆಯನ್ನೂ ವ್ಯಕ್ತಿತ್ವವನ್ನೂ ಮೆಚ್ಚಿದ್ದರು. ಅಹಿಂಸೆಯ ಪ್ರತಿಪಾದಕರಾಗಿದ್ದರು. ವೇದಗಳು, ಉಪನಿಷತ್ತುಗಳನ್ನು ಅಭ್ಯಾಸ ಮಾಡಿದ್ದರು. ಸುತ್ತ ನಡೆದಿದ್ದ ಸ್ವಾತಂತ್ರ್ಯ ಸಂಗ್ರಾಮವನ್ನು ಕಾಣುತ್ತಿದ್ದರು, ಅದನ್ನು ಕಲಿತು ಚಿಂತಿಸುತ್ತಿದ್ದರು. (ಪ್ರೊ. ಎಲ್.ಎಸ್. ಶೇಷಗಿರಿರಾವ್, ಪು. 19) ಕುವೆಂಪು ಅವರಿಗೆ ಕೆಲವರ ಮಾರ್ಗದರ್ಶನದಲ್ಲಿ ಶ್ರದ್ಧೆ, ಭಕ್ತಿ ರೂಢಿಸಿಕೊಂಡಿದ್ದರು

# ಅಧ್ಯಾಯ - 5

## ಸಮಾರೋಪ

ಕುವೆಂಪುರವರು ಕೇವಲ ವ್ಯಕ್ತಿಯಾಗಿರಲಿಲ್ಲ ಅವರೊಬ್ಬರು ಕನ್ನಡನಾಡಿನ ಶಕ್ತಿಯಾಗಿದ್ದವರು. ಕುವೆಂಪು ಬಹಳ ಸ್ಥುರದ್ರೂಪಿ. ಅವರ ನಡೆ, ನುಡಿ, ನಿಲುವು ಎಲ್ಲ ಗಂಭೀರ ಹಾಗೂ ಶ್ರದ್ಧೆ, ಭಕ್ತಿಯಲ್ಲೂ ಶ್ರೇಷ್ಟರಾಗಿದ್ದಾರೆ. ರಾಮಕೃಷ್ಣ ಪರಮಹಂಸ, ವಿವೇಕಾನಂದ, ಅರವಿಂದರ ಚಿಂತನೆಯನ್ನು ಮಾಡಿದ್ದವರು ಹಾಗೂ ಸಂಸ್ಕೃತ ಕವಿಗಳಾದ ಕಾಳಿದಾಸ, ಭವಭೂತಿ ಅವರ ಕಾವ್ಯಗಳನ್ನು ಅಭ್ಯಾಸ ಮಾಡಿದ್ದವರು, ಮಲೆನಾಡಿನ ಚಿತ್ರಗಳಲ್ಲಿ ಅನೇಕ ರೀತಿಯ ಪಾತ್ರವರ್ಗದವರು ಹಾಗೂ ಸಾಮಾಜಿಕ ಜೀವನ, ವರ್ಣನೆ ಇಂತಹ ವಿಷಯಗಳು ಮೂಡಿಬಂದಿವೆ. ಆದರೆ ಈ ನನ್ನ ಸಂಶೋಧನೆ ಕೃತಿಯಲ್ಲಿ ಮಲೆನಾಡಿನಲ್ಲಿ ಉಂಟಾದಂತಹ ಕೆಲವು ವಿಚಾರ-ವಿನಿಮಯಗಳು ಕುವೆಂಪುರವರ ಮೇಲೆ ಬೀರಿದಂತಹ ಪ್ರಭಾವವನ್ನು ತಿಳಿಸಿದ್ದೇನೆ.

ಕುವೆಂಪು ಸಮೃದ್ಧವಾಗಿ ಬರೆದರು. ಆಶ್ಚರ್ಯದ ಸಂಗತಿ ಎಂದರೆ ವಯಸ್ಕರಾಗಿ ಅನುಭವವನ್ನು ಗಳಿಸಿಕೊಂಡು ವಿಚಾರ ಸಾಹಿತ್ಯವನ್ನು ತಮ್ಮ ಬರಹಗಳ ಮೂಲಕ ಎಲ್ಲಾ ವರ್ಗದವರು ಆಕರ್ಷಿಸುವಂತೆ ಕೆಲವು ವಿಚಾರಗಳನ್ನು ಸಮಾಜಕ್ಕೆ ತಿಳಿಸಿದಂತಹ ಅತ್ಯಂತ ಶ್ರೇಷ್ಠ ವ್ಯಕ್ತಿಯಾಗಿದ್ದಾರೆ.

ಕುವೆಂಪುರವರು ತಮ್ಮ ಕವನಗಳನ್ನು ಇತರ ವ್ಯಕ್ತಿಗಳಿಗೆ ಹೋಲಿಸಿದರೆ. ಅಲ್ಲಿ ಕೆಲವು ರೀತಿಯ ಸನ್ನಿವೇಶಗಳು ಉಂಟಾಗುತ್ತಾ ಹೋಗುತ್ತವೆ. ಏಕೆಂದರೆ ಇಲ್ಲಿ ಅನುಭವದ ಮೂಲಕ ಕವಿಯೂ ವರ್ಣನೆಯಾಗಲಿ, ಸಮಾಜದ ಸಾಮಾಜಿಕ ಜೀವನವಾಗಲಿ, ಇನ್ನಿತರ ವಿಷಯಗಳನ್ನು ತಾವು ಅನುಭವಿಸಿ ಹೇಳಿದಂತಹ ಕವಿಯಾಗಿದ್ದಾರೆ.

ಇಂತಹ ಕವಿಯೂ ತಮ್ಮ ಒಂದೊಂದು ಕೃತಿಯಲ್ಲಿ ಒಂದೊಂದು ರೀತಿಯ ವಿಶೇಷತೆಯ ಅಂಶಗಳನ್ನು ರಚಿಸಿದ್ದಾರೆ. ಅದರಲ್ಲಿ "ಕಾನೂರು ಹೆಗ್ಗಡತಿ" ಹಾಗೂ "ಮಲೆಗಳಲ್ಲಿ ಮದುಮಗಳು" ಇವೆರಡು ಕಾದಂಬರಿಗಳೂ ಕನ್ನಡ ಸಾಹಿತ್ಯ ಎರಡು ಕಣ್ಣುಗಳಂತೆ ಎಂಬ ನನ್ನ ಅನಿಸಿಕೆ ಏಕೆಂದರೆ ಇಲ್ಲಿನ ಪ್ರತಿಯೊಂದು

ಪಾತ್ರಗಳಿಗೆ ಸಮಾನವಾದಂತಹ ಜೀವ ತುಂಬಿದ್ದಾರೆ. ಇಂತಹ ಮಹಾಕವಿ ಸರಳಜೀವ, ಎಲ್ಲರನ್ನು ಆಕರ್ಷಿಸುವಂತಹ ಮನೋಭಾವನೆಯನ್ನು ಹೊಂದಿರುವಂತಹ ನಮ್ಮ ಕುವೆಂಪು.

ಕುವೆಂಪುರವರ ಮಲೆನಾಡಿನ ಚಿತ್ರಗಳಲ್ಲಿ ಕೆಲವು ವಿಚಾರಗಳನ್ನು ಹೇಳುತ್ತಾ ಹೋಗಿದ್ದಾರೆ. ಇಲ್ಲಿನ ಆಚಾರದಲ್ಲಿ ಸಾಮಾಜಿಕ ಜೀವನ ಹಾಗೂ ಪ್ರಕೃತಿವರ್ಣನೆಗೆ ಕುವೆಂಪು ಯಾವ ರೀತಿಯ ಅಂಶಗಳನ್ನು ವ್ಯಕ್ತಪಡಿಸಿದ್ದಾರೆ. ಇದರಲ್ಲಿ ಕೆಲವು ವಿಚಾರಗಳು ನನ್ನ ಮನಸಿಗೆ ಅವಶ್ಯಕ ಅಂಶಗಳಾಗಿದ್ದು ಕೆಲವು ಗಮನಿಸಿದಂತಹ ವಿಷಯಗಳು ಪ್ರಶ್ನೆಯಾಗಿದ್ದು ಅವುಗಳಲ್ಲಿನ ಕೆಲವು ವಿಚಾರಗಳನ್ನು ಪ್ರಸ್ತಾಪಮಾಡಲು ಪ್ರಯತ್ನಿಸಿದ್ದೇನೆ. ಇಂತಹ ಅಧ್ಯಯನಗಳು ಓದುವಂತಹ ಹಾಗೂ ಬರೆಯುವಂತಹ ವ್ಯಕ್ತಿಯ ಮೇಲೆ ಪ್ರಭಾವಬೀರಿ ಅದರಲ್ಲೂ ಕೆಲವು ರೀತಿಯ ವಿಚಾರ–ಸಾಹಿತ್ಯಕ ವಿಷಯಗಳು ಮೂಡಿಬರಬೇಕೆಂಬುದು ನನ್ನ ವಾದವಾಗಿದೆ.

## ಪರಾಮರ್ಶನ ಗ್ರಂಥಗಳು


1. ಆರ್.ದೊಡ್ಡೆಗೌಡ, ರಾಷ್ಟ್ರಕವಿ ಕುವೆಂಪು, 2013, ಪ್ರಿಂಟೆಕ್ ಪ್ರಿಂಟರ್ಸ್, ಬೆಂಗಳೂರು.
2. ಉಮಾಕಾಂತ ಗೌಡ, ಕೇಂದ್ರ, ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕನ್ನಡ ಸಾಹಿತಿಗಳು, 2011, ತಾರಾ ಪ್ರಿಂಟರ್ಸ್, ಮೈಸೂರು.
3. ಎಲ್.ಎಸ್. ಶೇಷಗಿರಿರಾವ್, ಕುವೆಂಪು, 2015, ಪ್ರಿಂಟೆಕ್ ಪ್ರಿಂಟರ್ಸ್, ಬೆಂಗಳೂರು.
4. ಕುವೆಂಪು, ಮಲೆಗಳಲ್ಲಿ ಮದುಮಗಳು, 2014, ಹರ್ಷ ಪ್ರಿಂಟರ್ಸ್, ಮೈಸೂರು.
5. ಕುವೆಂಪು, ಸಮಗ್ರ ಗದ್ಯ ಸಂಪುಟ – 1, 2003, ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್.
6. ಕುವೆಂಪು, ನೆನಪಿನ ದೋಣಿಯಲ್ಲಿ, 2011, ಸ್ಕಂದ ಆಫ್‌ಸೆಟ್ ಪ್ರಿಂಟರ್ಸ್.
7. ಕುವೆಂಪು, ಮಲೆನಾಡಿನ ಚಿತ್ರಗಳು, 2014, ಹರ್ಷಪ್ರಿಂಟರ್ಸ್, ಮೈಸೂರು.
8. ಕುವೆಂಪು ಕಾನೂರು ಹೆಗ್ಗಡತಿ, 1997, ಸ್ಕಂದ ಆಫ್‌ಸೆಟ್ ಪ್ರಿಂಟರ್ಸ್,
9. ಕೆ.ಸಿ. ಶಿವಾರೆಡ್ಡಿ, ಕುವೆಂಪು ಸಮಗ್ರ ಗದ್ಯ ಸಂಪುಟ – 1, 2000, ಪ್ರಸಾರಂಗ, ಹಂಪಿ.
10. ಕೆ.ಸಿ. ಶಿವಾರೆಡ್ಡಿ (ಸಂ), ಕುವೆಂಪು ಸಮಗ್ರ ಕಾವ್ಯ ಸಂಪುಟ – 2, 2000, ಪ್ರಸಾರಂಗ, ಹಂಪಿ.
11. ಕೆ.ಸಿ. ಶಿವಾರೆಡ್ಡಿ (ಸಂ), ಕುವೆಂಪು ಸಮಗ್ರ ಕಾವ್ಯ ಸಂಯೋಜಕ, 2000, ಪ್ರಸಾರಂಗ, ಹಂಪಿ.
12. ದೆ.ಜಗೌ. ಕುವೆಂಪುದರ್ಶನ, 2007.
13. ದೆ.ಜಗೌ, ಕುವಂಪು ದರ್ಶನ ಸಂಪುಟ – 1, 2012.
14. ಪ್ರಭುಶಂಕರ, ಕೃತಿಶೀಲ, 2007, ಸ್ನೇಹ ಪ್ರಿಂಟರ್ಸ್.
15. ಬಿ.ಎಸ್. ಬಸವಲಿಂಗಯ್ಯ ಮತ್ತು ಮಾಚಿ ಕೈಲಾಸನಾಥ್ (ಸಂ), ವಿಶ್ವಕವಿಗೆ ನುಡಿನಮನ, 2003, ನವೋದಯ ಪ್ರಕಾಶನ, ಬೆಂಗಳೂರು.
16. ಬೆ.ಗು. ರಮೇಶ್, ರಾಷ್ಟ್ರಕವಿ ಕುವೆಂಪು, 2011, ವೀರಮ್ಮಾಜಿ ಪ್ರಿಂಟರ್ಸ್, ಬೆಂಗಳೂರು.
17. ರೂಪ, ರಾಷ್ಟ್ರಕವಿ ಕುವೆಂಪು ಜೀವನ ಹಾಗೂ ಸಂದೇಶ, ವಾಗಾರ್ಥ ಪ್ರಿಂಟರ್ಸ, ಬೆಂಗಳೂರು
18. ಹೆಚ್.ಎಲ್. ನಾಗೇಗೌಡ, ಮಲೆನಾಡ ವಾಲ್ಮೀಕಿ, 2001, ಕರ್ನಾಟಕ ಜಾನಪದ ಪರಿಷತ್.
19. ಹೆಚ್.ಜೆ. ಲಕ್ಕಪ್ಪಗೌಡ, ಸಾಹಿತ್ಯಶೋಧನ, 2007, ಪ್ರಿಂಟ್‌ಪಾರ್ಕ್.

